# ಶ್ರೀ ಕಾವೇರಿ ಕಥಾಮೃತಂ

M.S. ಅನಂತಪದ್ಮನಾಭರಾವ್

# ೀ ಕಾವೇರಿ ಕಥಾಮೃತಮ್

ಎಂ. ಎಸ್. ಅನಂತಪದ್ಮನಾಭರಾವ್



# ಶ್ರೀ ಕಾವೇರಿ ಕಥಾಮೃತಮ್



ಎಂ. ಎಸ್. ಅನಂತಪದ್ಮನಾಭರಾವ್

ಮೈಸೂರು
ಕ್ರೌನ್ ಎಲೆಕ್ಟ್ರಿಕ್ ಪ್ರೆಸ್







ಶ್ರೀ

ಕವಿಯ ಉತ್ಸಾಹಿಗಳಾದ ಹಿತಚಿಂತಕರೊಬ್ಬರು
ಈ ಕಾವ್ಯವನ್ನು ಮುದ್ರಣ ಮಾಡಿಸಿರುವರು.
ಇದರ ಸರ್ವ ಸ್ವಾತಂತ್ರವೂ ಗ್ರಂಥಕರ್ತರಿಗೆ ಸೇರಿದೆ.
ಈ ಪುಸ್ತಕವು ಗ್ರಂಥಕರ್ತರಲ್ಲಿ ದೊರೆಯುತ್ತದೆ.

# ಮುನ್ನುಡಿ.

**ಯಾ**ವುದಾದರೊಂದು ಗ್ರಂಥಕ್ಕೆ ಮುನ್ನುಡಿಯನ್ನು ಬರೆವುದೆಂದರೆ ಸಣ್ಣ ಕೆಲಸವಲ್ಲ; ಅದನ್ನೋದಿ ಒಳಗೊಂಡಿರುವ ಸ್ವಾರಸ್ಯವನ್ನು ಆಸ್ವಾದಿಸುವುದಷ್ಟೆ ಅಲ್ಲ; ಗುಣದೋಷಗಳನ್ನೂ ತಿಳಿದುಕೊಳ್ಳಬೇಕು; ಕಡೆಗೆ ಎಲ್ಲವನ್ನೂ ಕ್ರೋಢೀಕರಿಸಿ ಓದುಗಾರರಿಗೆ 'ಅಂಗೈನೆಲ್ಲಿ' ಯಾಗುವಂತೆ, ಸಂಗ್ರಹವಾಗಿ, ಅಂದವಾಗಿ ಅವನ್ನೆಲ್ಲ ವಿವರಿಸಿ ಆ ಮೇಲೆ ತನ್ನ ಅಭಿಪ್ರಾಯದ ಒಗ್ಗರಣೆಯನ್ನೂ ಕೊಡಬೇಕು. ಇದು ಮುನ್ನುಡಿಕಾರನ ಕರ್ತವ್ಯವು. ಆದರೆ ಅದರಿಂದ ಏನಾದರೂ ಪ್ರಯೋಜನವಾಗಬೇಕಾದರೆ, ಆ ಬರೆದವನ ಬಲ್ಲವಿಕೆಯಲ್ಲಿ ಓದುಗಾರರಿಗೆ ನಂಬುಗೆ ಅತ್ಯವಶ್ಯ. ಇಷ್ಟು ಯೋಗ್ಯತೆ ನನ್ನಲ್ಲಿದೆಯೆಂಬ ವಿಶ್ವಾಸವು ನನಗೇ ಇಲ್ಲ. ಆದರೂ ನನ್ನ ಆಪ್ತರಾದ ಬ್ರ॥ ಶ್ರೀ॥ ಓಡ್ಲಮನೆ ಆತ್ಮಾರಾಮ ಶಾಸ್ತ್ರಿಗಳವರ ಅಪ್ಪಣೆಯಂತೆ, ಈ ಕಾವ್ಯಕ್ಕೆ ಮುನ್ನುಡಿ ಬರೆಯಲು ಒಪ್ಪಿಕೊಂಡೆನು. ತಪ್ಪೊಪ್ಪುಗಳನ್ನು ಸಹೃದಯರು ವಿಮರ್ಶಿಸಿಕೊಳ್ಳಬೇಕಾಗಿ ಪ್ರಾರ್ಥನೆ.

"ಕಾವೇರಿ ಕಥಾಮೃತಮ್" ಎಂಬ ಈ ಚಿಕ್ಕ ಕಾವ್ಯವನ್ನು ರಚಿಸಿದವರು ಕೊಡಗಿನ ಮ॥ ರಾ॥ ಎಂ. ಎಸ್. ಅನಂತಪದ್ಮನಾಭರಾಯರೆಂಬ ತರುಣ ಕವಿಗಳು. ತನ್ನ ಉದ್ಯೋಗವು ಬೇರೆಯಾದರೂ ಕರ್ಣಾಟಕ ಭಾಷಾಭಕ್ತಿ, ಇವರಲ್ಲಿ ಸ್ವಾಭಾವಿಕವಾಗಿ ಬೇರೂರಿದೆಯೆಂದು ತೋರುತ್ತದೆ. ಇವರು ಇಂಥ ಕೆಲವು ಕಾವ್ಯಗಳನ್ನು ಬರೆದು—ಬರೆಯುತ್ತಿರುವುದಷ್ಟೆ ಅಲ್ಲ; ಇವರ ಒಂದೊ ಎರಡೊ ಕಾವ್ಯಗಳು ಪ್ರಕಟವಾಗಿವೆಯೆಂದೂ ತಿಳಿದು ಬಂದಿದೆ. ಇಂಥ ತರುಣರಾದ ಕನ್ನಡಿಗರು ಭಾಷಾಸೇವೆಯಲ್ಲಿ ತೊಡಗಿರುವುದು ಆನಂದದ ಸಂಗತಿ.

ಪ್ರಕೃತ ಕಾವ್ಯವು ವಾರ್ಧಿಕ್ಯಷಟ್ಪದಿಯಲ್ಲಿ ಬರೆಯಲ್ಪಟ್ಟಿದೆ. ಕ್ರಮವಾಗಿ ೧ ಬಿನ್ನಹ, ೨ ಗಂಗಾ ಕಾವೇರಿಯರ ಪ್ರಭಾವ, ೩ ಭೂ ಲೋಕಾಗಮನ, ೪ ಕಾವೇರಿಯ ವಿವಾಹ, ೫ ಕಾವೇರಿಯು ನದಿಯಾದುದು, ೬ ಕನಕಾನದಿಯ ವೃತ್ತಾಂತ, ೭ ತೀರ್ಥಕ್ಷೇತ್ರಗಳ ಮಹಿಮೆ, ೮ ಯಾತ್ರಾಫಲ, ಎಂಬ ಎಂಟು ಸಂಧಿಗಳು ಇದರಲ್ಲಡಕವಾಗಿವೆ. ಇವರ ಭಾಷೆಯಲ್ಲಿ ಒಂದು ಬಗೆಯ ಸ್ವಾಭಾವಿಕವಾದ ಹರಿತವಿದೆ. ಬಹಳಕಾಲ ಆಲೋಚಿಸಿ ಪ್ರಯತ್ನದಿಂದ ಬರೆದಂತೆ ತೋರುವುದಿಲ್ಲ. ಇದು ಕವಿಗಳಲ್ಲಿರಬೇಕಾದ ಒಂದು ಗುಣವೆಂದೆ ಹೇಳಬೇಕು. ಈ ಶಕ್ತಿಯೊಂದಿಲ್ಲದಿದ್ದರೆ ಪ್ರಯತ್ನದಿಂದೊದಗುವ ಇತರ ಶಕ್ತಿಗಳೆಲ್ಲವೂ ಸಫಲಗಳಾಗುವುದಿಲ್ಲ.

ಕಾವ್ಯದ ಕತೆ ಪೌರಾಣಿಕವೆಂಬುದು ಬೇರೆ ಹೇಳಬೇಕಾಗಿಲ್ಲ. ಆದರೆ ಕಾವ್ಯರಚನೆಯಲ್ಲಿ ಸ್ವಲ್ಪ ನೂತನತ್ವವನ್ನು ತೋರಿಸುತ್ತಿದ್ದರೆ ಇನ್ನಷ್ಟು ಆಕರ್ಷಕವಾಗುತ್ತಿತ್ತೆಂದು ಕೆಲವರಿಗೆ ತೋರಬಹುದು. ಅದು ಹೇಗೂ ಇರಲಿ ; ಪ್ರಕೃತ ಕಾವ್ಯವು ಪೂರ್ವಪದ್ಧತಿಯದೆ ಆದಕಾರಣ ಆ ವಿಮರ್ಶೆಯ ತೊಡಕಿಗೆ ಕೈ ಹಾಕುವುದೇಕೆ ? ಈ ಕಾವ್ಯದ ಆಯಾ ಭಾಗಗಳಲ್ಲಿ ದೇಶಭಕ್ತಿ, ಪುರಾಣಪ್ರಿಯತೆ, ಭಾಷಾಪ್ರೇಮ ಮೊದಲಾದ ಗ್ರಂಥಕಾರರ ಸದಾಶಯಗಳು ಹೊರಪಡುತ್ತವೆ. ಸದ್ಯಃ ಕಾಲದಲ್ಲಿ ಇಂಥ ಭಾವನೆಗಳು ದೇಶದಲ್ಲಿ ನೆಲೆಗೊಳ್ಳಬೇಕಾಗಿದೆಯೆಂಬುದನ್ನು ಹೇಳಬೇಕಾಗಿಲ್ಲ.

ನಮ್ಮ ಕನ್ನಡನಾಡಿನಲ್ಲಿ ಉದ್ಗಮಿಸಿ ಇಡೀ ದಕ್ಷಿಣದೇಶವನ್ನೇ ಸರ್ವ ಸಂಪತ್ಸಮೃದ್ಧವನ್ನಾಗಿ ಮಾಡಿ ಹರಿದ ಕಾವೇರಿಯನ್ನು ಕಾವ್ಯಪ್ರವಾಹವಾಗಿ ಹರಿಯಿಸಿದ ಪುಣ್ಯವು ಅನಂತಪದ್ಮನಾಭರಾಯರಿಗೊದಗಿದುದು ಆನಂದದ ಸಂಗತಿ. ಇವರು ಇನ್ನೂ ಅನೇಕ ಕಾವ್ಯಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ನೆರವಾಗಲಿ, ಆ ಕೆಲಸಕ್ಕೆ ಕನ್ನಡಿಗರು ಆಶ್ರಯವನ್ನೀಯಲಿ, ಎಂಬುದೆ ನನ್ನ ಪ್ರಾರ್ಥನೆ.

ಮಂಗಳೂರು,
ತಾ|| ೩-೭-೧೯೩೨.

**ಮುಳಿಯ ತಿಮ್ಮಪ್ಪಯ್ಯ.**

# ಕಥಾಮುಖ.

---

ಸತ್ಯಲೋಕದಲ್ಲಿ ಬ್ರಹ್ಮಸಭೆಯಲ್ಲಿ ಗಂಗಾ ಕಾವೇರಿಯರ ಮಹತ್ವವನ್ನು ಕುರಿತು ಪ್ರಶಂಸೆ ನಡೆಯುತ್ತಿರಲು ಲಕ್ಷ್ಮೀಸ್ವರೂಪಿಣಿಯಾದ ಕಾವೇರಿಯು ಬ್ರಹ್ಮನಿಗೂ, ಗಂಗಾದೇವಿಗೂ ತಾಯಿಯಾದುದರಿಂದ ಅವಳೇ ಪರಮ ಶ್ರೇಷ್ಠಳೆಂದು ಬ್ರಹ್ಮನು ನಿರೂಪಿಸಿದನು. ಭಾಗವತೋತ್ತಮನಾದ ಕವೇರಮುನಿಯು ಬ್ರಹ್ಮನನ್ನು ಕುರಿತು ಉಗ್ರತಪಸ್ಸನ್ನು ಮಾಡಿ ಬ್ರಹ್ಮಮಾನಸ ಪುತ್ರಿಯಾದ ಲೋಪಾಮುದ್ರೆಯನ್ನು (ಕಾವೇರಿಯನ್ನು) ಔರಸಪುತ್ರಿಯಾಗಿ ಪಡೆದನು. ಈ ಲೋಪಾಮುದ್ರೆಯು ಲಕ್ಷ್ಮೀ ಪಾರ್ವತಿಯರ ಅಂಶಾವತಾರಿಯು.

ಲೋಪಾಮುದ್ರೆಯು ಶಿವಾಂಶ ಸಂಭೂತನಾದ ಅಗಸ್ತ್ಯನನ್ನು ಪ್ರತ್ಯಕ್ಷನನ್ನಾಗಿ ಮಾಡಿಕೊಂಡು ಅವನಿಚ್ಛೆಯಂತೆ ಮಾತಾಪಿತೃಗಳನುಜ್ಞೆಯಿಂದ ಅವನನ್ನು ವರಿಸಿದಳು. ಆ ಕಾಲದಲ್ಲಿ, ಪತಿ ಪತ್ನಿಯರು ದೂರವಾಗಿದ್ದ ಸಮಯದಲ್ಲಿ ಲೋಪಾಮುದ್ರೆಯು ಭೂಲೋಕೋಪಕಾರಾರ್ಥವಾಗಿ ನದೀ ರೂಪದಲ್ಲಿ ಪ್ರವಹಿಸಬಹುದೆಂಬ ಪತಿಯ ವಾಗ್ದಾನವನ್ನು ಪಡೆದಳು. ವಿವಾಹಾನಂತರ ಕಾಶಿಯಲ್ಲಿ ಕೆಲಕಾಲವಿದ್ದು ವಿಂಧ್ಯನ ಮದಹರಣ ಮಾಡುವುದಕ್ಕಾಗಿ ಅಗಸ್ತ್ಯನು ಪುನಃ ಬ್ರಹ್ಮಗಿರಿಗೆ ಬರುವಾಗ ನಡುಹಾದಿಯಲ್ಲಿ ವಿಂಧ್ಯಗರ್ವಖಂಡನಮಾಡಿದನು. ಒಮ್ಮೆ ಬ್ರಹ್ಮದತ್ತವಾದ ಅಕ್ಷಯ ಜಲ ಕಮಂಡಲುವಿನಲ್ಲಿ ಕಾವೇರಿಯನ್ನು ಜಲರೂಪದಲ್ಲಿರಿಸಿ ಆ ಪಾತ್ರೆಯನ್ನು ಶಿಷ್ಯರ ಹಸ್ತ ಕೊಟ್ಟು ಕನಕೆಗೆ ಸ್ನಾನಾರ್ಥವಾಗಿ ಹೋಗಿರಲು ಇದೇ ಸಮಯವೆಂದು ಲೋಪಾಮುದ್ರೆಯು ಆ ಕಮಂಡಲುವಿನಿಂದ ಕಾವೇರೀನದಿಯಾಗಿ ಹರಿದು ಲೋಕಪಾವನೆಯೆನಿಸಿದಳು. ಮುಂದೆ ಅರ್ಧರೂಪದಿಂದ ಕಾವೇರಿ ನದಿಯಾಗಿಯೂ ಉಳಿದರ್ಧ ಅಂಶದಿಂದ ಲೋಪಾಮುದ್ರೆಯಾಗಿ ಅಗಸ್ತ್ಯನೊಡನಿದ್ದು ಜಗತ್ಕಲ್ಯಾಣವನ್ನು ಮಾಡಿದಳು. ಸುರನರೋರಗರೆಲ್ಲರೂ ಅವಳ ಮಹಿಮೆಯನ್ನು, ಈಗಲೂ ಕೊಂಡಾಡುತ್ತಿರುವರು.

ಶ್ರೀರಾಮಸಹಾಯಂ.

# ಶ್ರೀ ಕಾವೇರಿ ಕಥಾಮೃತಮ್

## ಬಿನ್ನಹ

ಶ್ರೀ ಜಾನಕೀರಮಣನಲೆದಾಡಿ ಕಾನನದಿ
ಭೋಜನವ ಮಾಡಿಸಿದ ರಕ್ಕಸರ ರಕ್ತವಂ
ಈ ಜಗದ ಭೂತಗಣವಂ ಕರೆದು ಭಕ್ತರಂ ಸೇರಿದನು ಪದುಳದಿಂದ |
ರಾಜ ರಾಜರ ಗಂಡ ಶಬರಿಯೆಂಜಲನುಂಡ
ಮೂಜಗದ ದೇವತಾಂ ಕಪಿವೃಂದದೊಳ್ನಲಿದ
ರಾಜೀವ ಲೋಚನಂ ಶ್ರೀರಾಮವಿಠ್ಠಲಂ ಕುಡುಗೆಮಗೆ ಸಂಪದವನು ||

ಜಗವ ಗುಡಿಯಂ ಮಾಡಿ ಆಗಸವೆ ಆವರಣ
ನಗಗಳೆಲ್ಲವು ರತ್ನ ಕಂಭಗಳು-ತರುಚಯವು
ಸೊಗಮಿರ್ಕೆ ಪುಷ್ಪವೇ ಶೃಂಗಾರ, ಉತ್ತಮರ ಹೃದಯವೇ ಶಯನವೆನಿಸಿ |
ಮುಗಿಲದನಿ ತೊಡಲುಲಿಯು, ಜಲಧಾರೆ ಮಜ್ಜನವು
ಖಗಮಿಗವೆ ಬಂಧುಗಳು ಜನರಾಡುತಿಹ ಮಾತು
ಮಿಗೆ ವೇದಘೋಷಗಳ್ ಭಕ್ತಿಫಲ ನೈವೇದ್ಯ ದೇವದೇವನಿಗೆ ಧೊರೆಗೆ ||

ನಮ್ಮ ದೇವನಿಗೊಂದು ಕಿಡಿಗಣ್ಣು ಫಾಲದಲಿ
ಒಮ್ಮೆ ಬೇಡಲ್ಕವನ-ಬೇಡುತಿಹನವ ಭಿಕ್ಷೆ
ನೆಮ್ಮಿಹಂ ಮಾವನಂ ಸೇರಿಹಂ ಸತಿಗೇಹ ಬರಿಮೈಯ ಬೂದಿಯಿಂದ |
ಕಮ್ಮಲರ ಮಾಡಿಹನು, ಚಳಿಯ ಬೆಟ್ಟದೊಳಿದ್ದು
ಹೆಮ್ಮೆಯಂ ತೊರೆದಿಹಂ ವಿಷಪಾನದಿಂ ನೊಂದು
ಉಮ್ಮಳಿಸು ತುರಗವಂ ಕೊರಳೊಳಗೆ ತೊಟ್ಟಿಹನು ಶರಣರಕ್ಷಕನಾದೊಡೇಂ

ಅಖಿಳ ದೇವತೆಗಳಿಂದಗ್ರಪೂಜೆಯು ಪಡೆದ
ಸಕಲಗುಣ ಪರಿಪೂರ್ಣ ಸರ್ವ ಸಿದ್ಧಿ ಪ್ರದಂ
ನಿಖಿಳ ನಿಗಮಸ್ತುತ್ಯ ಗಜವದನ ಗಣರಾಯ ಬರ್ದಿಲರ ಮಂದಾರನು |
ಭಕುತಿಯಿಂ ಭಾವಿಸುವ ಭಕ್ತರಂ ಪೊರೆಯುವಂ
ಶಕುತಿಯಂ ಮುಕುತಿಯಂ ಕೊಡುವ ಬಿರುದಂ ಪಡೆದ
ಸಕಲ ಭುವನವ ಪೊರೆವ ಇಲಿದೇರ ಭರದಿ ನಿರ್ವಿಘ್ನಮಂ ನಮಗೀಯಲಿ ||

ಸರುವ ಹೃದಯದೊಳಿದ್ದು ಅವಿವೇಕಮಂ ತೊಳೆದು
ಕೊರೆದು ಹೃತ್ಕಮಲಮಂ ಮತಿಮಧುವನೊಸರುತ್ತ
ನರಮೃಗಂಗಳ ಮನದಿ ನಲಿದಾಡುತೊಲಿದಿರುವಳೀ ಮಾತೆ ಮಾಯದಿಂದ |
ಇರಲೆಮಗೆ ಬಡತನವು ಬರಲೆಮಗೆ ಕಷ್ಟಗಳು
ಮರೆಯದಂತೀ ಮಾತೆ ರಸನೆಯೊಳಗೆಸೆಯುತಿರೆ
ಸರಸತಿಯು ಬಲ್ಮೆಯಿಂ ನಿಜರೂಪನಾಮವೊಂದೊಸರಲ್ಕೆ ಮನಸಿನಲ್ಲಿ ||

ಪೇಳುವರು ಬಲ್ಲವರು ಪಾಲ್ಗಡಲ ಸುತೆಯೆಂದು
ಕೇಳಿಹೆನು ಕಮಲದೊಳಗುದಿಸಿ ಬಂದಿಹೆಯೆಂದು
ಪಾಲಿಸಲು ಜಗವನ್ನು ಬಹಳ ರೂಪದಿ ಬಂದ ದೇವಿಯೇ ಲಕ್ಷ್ಮಿಯೆಂದು|
ಕಾಳ ಸರ್ಪವೆ ಶಯನವಾಗಿರಲು ನಿನ್ನನ್ನು
ಪಾಲಿಸುವ ಧೊರೆ ಶರಧಿಯೊಳ್ಮಲಗಿ ಪೊಳೆಯುತಿರೆ
ಪೇಳುವರು ನಿರ್ಭಯದ ದೇಶದೊಳಗಿಹೆಯೆಂದು ಸಾಧುಗಳು ಬಗೆಬಗೆಯಲಿ||

ಕೊಡಗು ನಾಡೊಳು ಜನಿಸಿ ಕೊಡನ ಕುವರನ ವರಿಸಿ
ಪಡುವೆಟ್ಟದೊಳ್ ಸುರಿಸಿ ಜೀವನ ಸುಧಾರಸವ
ಕೊಡುವಳೀ ಕಾವೇರಿ ಮಲೆನಾಡ ಮಧುಪಾನ ಕರ್ಣಾಟ ಸೀಮೆಯೊಳಗೆ |

ತೊಡೆದು ಮಾಯುವನೆಲ್ಲ ಮುಡಿದು ಸತ್ಯದ ಜಲವ
ಕುಡಿಸುತಾನಂದಮಂ ಕದಡುತಲಿ ದೋಷಮಂ
ಪೊಡವಿಯೊಳ್ ಪಾಲಿಪಳು ಕರ್ಣಾಟ ಸಾಮ್ರಾಜ್ಯದಧಿದೇವಿ
ಮಾಯೊವಿಯು ||

ರಾಮಕೃಷ್ಣ ವಿವೇಕ ವಿದ್ಯವಾರಿಧಿ ತೀರ್ಥ
ನಾಮದೇವ ಕಬೀರ ಭಕ್ತರುದಿಸಿದ ನಾಡು
ಆ ಮಹಾ ಶೂರರಾಳಿದ ಬೀಡು ಸುರನದಿಯ ಸಿಂಗರದಿ ಮೆರೆವ ಕಾಡು |
ಭಾಮೆಯರ ಮನದೊಳಗೆ ನಲಿವ ಭಾರತ ಮಾತೆ
ಕಾಮನೆಯನರ್ತಿಯಿಂ ಕುಡುವ ಮಂಗಳದಾತೆ
ಮಾಮ್ಮೈಮ ಗಿರಿಗಳಿಂ ಗವಿಗಳಿಂ ಬೆಡಗಿಂದ ಪೊಳೆವ ಜನನಿಗೆ ನಮಿಪೆನು ||

ಗುರು ಪುರಂದರ ವಿಜಯ ಕನಕಾದಿ ಸಾಧುಗಳು
ಸುರಪುರದ ಲಕ್ಷ್ಮೀಶ ಕವಿರನ್ನ ನಾರಾಯ
ಣರು ಬೆಳೆದ ಜಕಣ ಡಂಕಣರಿದ್ದು ಹೊಳೆದಿಹುದು ಪುಲಿಕೇಶಿಮೊದಲಾಗಿಹ|
ವರ ರಾಜಪುತ್ರರಾಳಿದ ರಾಜ್ಯವೀ ನಾಡು
ಹರಿಹರರ ನೆಲೆವೀಡು ಸರಸತಿಯ ಸುಖವಸತಿ
ಸಿರಿದೇವಿ ಸೌಂದರ್ಯ ಸಿಂಗಾರ ಭಾಗ್ಯಮಿದು ಕರ್ಣಾಟ ಮಾತೃ ಭೂಮಿ||

ಬಲ್ಲಿದರ ಬೀಡಾಗಿ ಸಾಧುಗಳ ನಾಡಾಗಿ
ಬಿಲ್ಲಾಳ್ಗಳಂ ಪೊತ್ತ ಕವಿಯಾಣ್ಮರಂ ಪೆತ್ತ
ಒಳ್ಳಿತೀ ಕನ್ನಡದ ನುಡಿ ಸೇವೆಯಂ ಬಯಸಿ ಕರ್ಣಾಟ ನದಿಯ ವಿವರ |
ಮುಳ್ಳಿಡಿದ ಮರನೇರಿ ಫಲವ ತರುವವನಂತೆ
ನಲ್ಗತೆಯನೊರೆಯಲ್ಕೆ ಯತ್ನಿಸಿಹೆನದರಿಂದ
ಬಲ್ಲಿದರು ಸೇವಿಪುದು ಜೀವನದ ಮಧುರಸವ ದೋಷಮಂ ತೊರೆಯುತ್ತಲಿ||

ಮನದೊಳಗೆ ಮೂಡಿರುವ ನಲ್ನುಡಿಯ ನುಡಿದಿಹಂ
ವಿನಯದಿಂ ಕಾವೇರಿದೇವಿ ಚಾರಿತ್ರ್ಯಮಂ
ತನುವಿನಂತರದೊಳಿಹ ಪರಮಾತ್ಮನಾಜ್ಞೆಯಿಂ ಷಟ್ಪದಿಯ ಝೇಂಕಾರದಿಂ|
ದನಿವಿಡಿದು ಪುಷ್ಪದಿಂದೊಸರುತಿಹ ಮಧುರಸವ
ನನುನಯದಿ ಕೂಡಿಸುತ ಮಧುಪಾತ್ರೆಯಿತ್ತಿಹಂ
ತನಯ ಕನ್ನಡ ನುಡಿಯನಂತನೀ ನಲ್ಗತೆಯ ದೋಷದೊರೆದಾಲಿಸುವುದು||

ವಿದಿತ ಘನ ಕರ್ಣಾಟ ರಾಜ್ಯದೊಳಗುದಿಸುತ್ತ
ಪದೆದು ಪತಿ ಸೇವೆಯಂ ಮಾಡಿ ನದಿಯಾಗಲ್ಕೆ
ಹದಿ ಬದೆಯ ಧರ್ಮಮಂ ಜನಜಗತ್ ಸೇವೆಯಂ ತೋರಿದಳು ತಾನೆಮಾಡಿ|
ಪದಗಳನು ಹಾಡುವಳು ತೊದಲುಲಿವ ತೊರೆಯಿಂದ
ಸುಧೆಯಿತ್ತು ಹದಿನಾಲ್ಕು ಲೋಕವನು ಪೊರೆಯುಳು
ಮುದದಿಂದ ಮಲೆನಾಡ ಕೀರ್ತಿಯಂ ಬೆಳಗುವಳ್ ಕಾವೇರಿ ಮೂಲೋಕದಿ||

---

# ೨. ಗಂಗಾ ಕಾವೇರಿಯರ ಪ್ರಭಾವ

ತ್ರೈಲೋಕ್ಯ ದೊಳ್ಮೆರೆಯೆ ಧರ್ಮ ದೇವತೆಯೆನಿಸಿ
ಭೂಲೋಕದೊಳಗೆಸೆವ ಸಪ್ತ ಭೂ ಭಾಗದೊಳ್
ಮೇಲೆನಿಸಿ ಕೀರ್ತಿಯಿಂ ಮೆರೆಯುತಿದೆ ಸಕಲ ಸಾಮ್ರಾಜ್ಯದೊಳ್ .
ಭರತ ಖಂಡ |
ಕೈಲಾಸಗಿರಿಯಲ್ಲಿ ದಾಕ್ಷಾಯಿಣೀ ಸಹಿತ
ಫಾಲಲೋಚನನಿರುವ ಸಕಲ ಋಷಿ ತಪವೆಸಗು
ತಾಲೋಲ ಮಾಗಿರುವ ಶ್ರೀಹರಿಯ ಸತಿಯೆನಿಸಿ ಪೊಳೆಯುತಿದೆ ಭರತ
ರಾಜ್ಯ ||

ಆರೀವಳೀ ಮಾತೆ ಭೂಲೋಕ ವಿಖ್ಯಾತೆ ?
ಈರೇಳು ಜಗದೊಳಗೆ ಪ್ರಥಮ ಪಂಕ್ತಿಯ ನಿತ್ತು
ಶ್ರೀರಮಣನವತರಿಸಿ ಧರ್ಮ ಸಂಸ್ಥಾಪನವ ಗೈದಿರುವ ಪುಣ್ಯ ಭೂಮಿ |
ಶ್ರೀರಾಮ ರಾಜ್ಯವೆಂದುರೆ ಪಡೆದು ವಿಖ್ಯಾತಿ
ಭೂರಮಣ ಧರ್ಮಸುತ ಧರ್ಮದಿಂ ಪಾಲಿಸಿದ
ಶೂರಯೋಧರ ಪೆತ್ತ ಸತ್ಯಶೀಲರ ತಾಯಿ ಸಕಲ ಜಗವೀರ ಮಾತೆ ||

ದೇವಾರದೊಳ್ಮೆರೆವ ಬರ್ದಿಲರ ತೆರನಂತೆ
ತೀವಿದತಿಶಯದಿಂದಲೀ ಮಹೀತಲದೊಳಗೆ
ಆವಗಂ ವಾಸಿಪರು ಮಾನವರು ಮುದದಿಂದ ಮೂವತ್ತುಮೂರು ಕೋಟಿ |
ಶ್ರೀ ವಧುವಿನಾಶ್ರಯದಿ ಶಾರದೆಯ ಕರುಣದೊಳ್
ಸೇವಿಸುತ ಮಾತೆಯಂ ಶ್ರೀಮಂತ ಧೀಮಂತ
ತೀವಿ ವಿದ್ವತ್ಸಭಾ ನೀರೇರುಹಾಕಾರದಿ ಕೂಡಿಹುದು ಭರತ ಭೂಮಿ ||

ಬಡಗುದೆಸೆಯೊಳ್ ಲೋಕ ವಿಖ್ಯಾತವಾಗಿರುವ
ಸುಡುಗಣ್ಣನಾವಾಸ ತುಹಿನಗಿರಿ ಶೋಭಿಸುತ
ಪಡುಮೂಡ ತೆಂಕಣದಿ ವಾರಿಧಿಯು ಬಳಸಿರಲ್ ನಡುವೆ ಜಂಬೂದ್ವೀಪವು|
ಅಡಿಯಿಡಲ್ಕಘನಾಶ ಶಯನಿಸಲ್ ಹರಿವಾಸ .
ಪೊಡವಿಯೊಳಗಿದುಸಗ್ಗ ಸಾಧು ಸಂತರ ನಿಲಯ
ಕಡುಧೀರವೀರರಿಂ ಮೆರೆವಳೀ ಭೂಮಾತೆ ಪ್ರಖ್ಯಾತೆ ಪುಣ್ಯದಾತೆ ||

ಪಲವುತರ ತರುಗಳಿಂ ಪಣ್ಗಾಯಿ ಪೂಗಳಿಂ
ತಿಳಿರಸದಿ ಸವಿಗೂಡಿ ಹಸಿವು ಬಾಯಾರಿಕೆಯ
ಸುಲಿದು ಸುಖವನ್ನೀವ ಪಾಂಥರಾಯಾಸಮಂ ನೀಗಿಸುವಸವಿಫಲಗಳಿಂ |
ಬಲು ಮುದದೊಳುಪಕಾರವೆಸಗಲ್ಕೆ ಮನುಜರಿಗೆ
ಇಳೆಯೊಳಗೆ ಪಶುಪಕ್ಷಿ ಜೀವಿಗಳಿಗಾಕರಂ
ತಿಲಮಾತ್ರ ಬಯಸದೆಯೆ ಪ್ರತಿಫಲವನೀವೃಕ್ಷವ್ರಾತಗಳ್ ನಿಂದಿರುವುವು ||

ಸಾರಂಗ, ಮಾತಂಗ, ಶರಭ, ಸಿಂಹಾದಿಗಳ್
ಘೋರ ವೃಕ ಸೂಕರಂ ವ್ಯಾಘ್ರಾದಿ ಕಪಿ ಕರಡಿ
ಕ್ರೂರ ಮೃಗ ವೃಂದಗಳ್ ಮೈತ್ರಿಯಿಂದೊಡಗೂಡಿ ನಲಿವುವೀ ಭೂಮಿಯಲ್ಲಿ |
ಸಾರವನುಹಿಂಡಿಡುವ ಗೋಮಾತೆ, ಗೋಪುತ್ರ
ವೈರಾಗ್ಯಮಂ ಕುಡುವ ಶುಕವೃಂದ, ಪಿಕವೃಂದ
ಸಾರತರದೊಳ್ಪಾಡುತಾನಂದಮನ್ನೀವ ಪಲವು ತರ ಪಕ್ಷಿ ನಿಕರ ||

ಪಡುವೆಟ್ಟ, ಮೂಡಗಿರಿ, ವಿಂಧ್ಯಾದ್ರಿ, ಸಹ್ಯಾದ್ರಿ,
ನಿಡಿದಾಗಿ ನೀಡಿರುವ ತುಹಿನಗಿರಿ ಉತ್ತರದಿ
ಎಡಬಿಡದೆ ಜಲನಿಬಿಡ ವಾಗಿರುವ ನದಿಗಳಿಗೆ ತವರುಮನೆಯಾಗಿರುವೆಡೆ |

ಅಡಿವಿಯೊಳ್ ದಂಡಕಾರಣ್ಯಮಿರೆ ದಕ್ಷಿಣದಿ
ಕಡುತರದ ಬೆಟ್ಟಗಳ್, ವಿಪಿನಗಳ್, ಗವಿಗಳಂ
ಪೊಡವಿಯೊಳ್ ನೋಡಲ್ಕೆ ಭರತಸಾಮ್ರಾಜ್ಯದೊಳ್ ಪಲವು
ಸಂಖ್ಯೆಯೊಳಿರುವುವು ||

ಈ ದೇಶದೊಳ್ ಸಕಲ ಕನಕ ರತ್ನಾದಿಗಳ್
ಶೋಧಿಸಿದ ನವರತ್ನ ವೈಡೂರ್ಯ ಮುತ್ತುಗಳ
ಮೇದಿನಿಯು, ಸಿರಿದಾತೆ ಪೊರೆಯುವಳು ತನಯರಂ
ಐಶ್ವರ್ಯಮನ್ನೀಯುತ |
ಸಾಧು ಪಾಪಿಗಳೆಂದು ದೇಶ ಪರದೇಶೀಯ
ಭೇದಮನ್ನೆಣಿಸದೆಯೆ ಸಕಲ ಸೌಭಾಗ್ಯಗಳ
ಮೋದದಿಂದೀವಳೀ ಭಾರತಾಂಬೆಯು ನಿತ್ಯ ಸಂತಸದಿ ಭೂಲೋಕಕೆ ||

ದುಷ್ಟರಂ ನಿಗ್ರಹಿಸಿ ಶಿಷ್ಟರಂ ಸಲಹಲ್ಕೆ
ವಿಷ್ಣು ತಾನವತರಿಸಿ ಪತ್ತು ಜನುಮವನೆತ್ತಿ
ಇಷ್ಟವಂ ಸಲಿಸುತ್ತ ಭಕ್ತರಂ ಪಾಲಿಸಿದ ಹರಿವಾಸ ಪುಣ್ಯಭೂಮಿ |
ಪುಟ್ಟಿದರು ನಳ, ನಹುಷ, ಮಾಂಧಾತ, ಧರ್ಮನೃಪ
ಕಟ್ಟುಗ್ರ ತಪಗೈದ ವಾಲ್ಮೀಕಿ ಚ್ಯವನಾದಿ
ಶಿಷ್ಟರಿಸಿಗಳ್ ಬಂದು ಪಾವನತ್ವವನಿತ್ತ ಪಾವನಳು ಭರತಭೂಮಿ ||

ಈವಲಯದೊಳು ಗಂಗೆ, ಮಾನದೀ ಬ್ರಹ್ಮಸುತ,
ಕಾವೇರಿ, ನರ್ಮದಾ, ವರತಪತಿ, ಸಿಂಧು, ಗೋ
ದಾವರೀ, ಕೃಷ್ಣ, ಐರಾವತೀ, ಮೊದಲಾದ ನದಿನದವು ಪರಿವುವಿಲ್ಲಿ |
ತೀವಿದತಿ ಪಾವಿತ್ರ್ಯ ಜನ್ಮಮನ್ನೀಯುತ್ತ
ಲಾವಗಂ ಮುಳುಗಿದರ ಪಾಪರಾಶಿಯ ಕಳೆದು
ಕಾವ ವಿಖ್ಯಾತಿಯಂ ಪಡೆದ ನದಿಗಳ ಹಡೆದ ಪರಿಶುದ್ಧಮಾತೆ ಇವಳು ||

ಪರಮ ಪಾವನೆ ಗಂಗೆ ಹರಿ ಪಾದ ಸಂಜಾತೆ
ಹರಶಿರೋವಾಸಿನಿಯು-ಪರಬೊಮ್ಮ ಸೋದರಿಯು
ದುರಿತಮಂ ದಹಿಸುವಳು ಮೋಕ್ಷಮಂ ನೀಡುವಳು ಸುರನದಿಯು
ವಿಖ್ಯಾತೆಯು |
ಹರಿಯುರಸಿಯಾಗಿರಲ್ ಕಾವೇರಿ ಜಾಹ್ನವಿಗೆ
ಪರಮಾತೆಯೆನಿಸಿದಳ್ ಬ್ರಹ್ಮ ಮಾನಸ ಪುತ್ರಿ
ಯುರೆ ಜನನಿಯೆನಿಸಿದಳ್ ಪಿತನಾದ ಬೊಮ್ಮನಿಗೆ ಸಕಲ ಲೋಕದ
ತಾಯಿಯು ||

ರಮಣೀಯ ಗಾನದಿಂ ವೀಣೆಯಂ ನುಡಿಸುತ್ತ
ವಿಮಲ ಮಾನಸ ಮೌನಿ ನಾರದನು ಬರುತಿರಲು
ರಮಣಿಯರನೊಂದುದಿನ ನೋಡಿದನು ಕಾವೇರಿ ಜಾಹ್ನವಿಯರೊಂದಿಗಿರಲು |
ಕಮಲನಾಭನ ಸತಿಯು ಕಾವೇರಿ ತಾಯಿ ತಾಂ
ಅಮರನದಿ ಶಿವ ಸತಿಯು-ಪರಮ ಪಾವನೆ ಯಾರು
ರಮಣಿಯರ ಪಂಕ್ತಿಯೊಳಗೆಂದೆನುತ ಶಂಕೆಯಂ ಪೊಂದಿದನು
ಸುರಮೌನಿಯು ||

ಇವರೀರ್ವರೊಳ್ ಪರಮ ಪುಣ್ಯ ತಮರಾರೆಂದು
ವಿವಿಧ ಪರಿಯಲಿ ಮುನಿಪ ಯೋಚಿಸುತ್ತಿರುತಿರಲ್
ತವಕದಿಂ ಸಂಶಯದಿ ಇವರೋರ್ವರೋರ್ವರೊಳಗತ್ಯಧಿಕ ಶಕ್ತಿಯನ್ನು |
ಇವರೀರ್ವರೊಳಗಾನು ಬಲ್ಲೆನಾದೊಡೆ ಮುಂದೆ
ಅವನಿಯೊಳಗೀ ಚರಿತೆ ಪಾವನತ್ವವ ಪೊಂದಿ
ದ್ರವಿಸಲ್ಕೆ ತಾನೊಂದು ಯುಕ್ತಿಯಂ ಭಾವಿಸಿದ ತರುಣಿಯರ ಬಳಿಗೈದಲು||

ಚಂದದಿಂದೊಡಗೂಡಿ ನಿಂದಿರುವ ಪೆಣ್ಗಳಂ
ಮುಂದೆ ಪೋಗುತ ಮುನಿಯು, ಕಾಣುತ್ತ ಪೇಳಿದನು
ಕುಂದೆಲ್ಲಮಂ ತೊಳೆವ, ಪಾಪನಾಶಿನಿಯೆನಿಸಿ, ಲೋಕಹಿತೆಯಾಗಿರುತಿಹ |

ಎಂದೆಂದಿಗೂ ಸರ್ವ ಲೋಕಪಾವನೆಯಾಗಿ
ಇಂದು ನಿಮ್ಮುಭಯರೊಳ್ ಪರಿಶುದ್ಧೆಯಾದವಳ
ವಂದಿಸುವೆ ಸಾಷ್ಟಾಂಗವೆರಗುತ್ತಲೀಗ ನಾನೆಂದು ಪಾಡುತ ನಡೆದನು ||

ಇಂತು ನುಡಿಯಲು ಮುನಿಯು ಶಂಕೆಯಿಂದೆಲ್ಲರುಂ
ಚಿಂತೆಗಾಸೆರೆಯಾಗುತೀ ಮಹಾ ವಧುಗಳೊಳು
ಹಂತಿಗೊಟ್ಟವರುಂಟೆ ಪಾವಿತ್ರ್ಯ ಪಾವನವು ಸಮವೆನಿಸಲೀರ್ವರೊಳಗೆ |
ಎಂತೆಂತು ಯೋಚಿಸಲ್ ಶ್ರೇಷ್ಠತಮರಾರೆಂದು
ಅಂಕರಾತ್ಮನ ನೇಹದಿಂ ಬಂದ ಪೆಣ್ಗಳೊಳು
ಮುಂತಿಳಿಯದಿರುತಿರಲು ಲೋಕದೊಳ್ ಕತ್ತಲೆಯು ಮುಸುಕಿರಲು
ಮಾಯದಿಂದ ||

ಅರಿಯಲ್ಕೆ ಶ್ರೀಗಂಗೆ ವಿಷ್ಣು ಪಾದೋದ್ಭವೆಯು
ಪರಮ ಪಾವನಮಾದ ನದಿಗಳಿಂದೊಡಗೂಡಿ
ಸರುವ ಪಾಪವ ಹರಿಸಿ ಶಿವ ಶಿರದೊಳಾವಗಂ ನೆಲಸಿರುವ ಲೋಕಮಾತೆ |
ಹರನಂಶ ಸಂಭೂತ ಕುಂಭಜನ ಸತಿಯಾಗಿ
ಸುರಗಂಗೆ ಯೊಳಗೊಂಡ ಬ್ರಹ್ಮ ಮಾನಸ ಪುತ್ರಿ
ಹರಿಯರಸಿ ಕಾವೇರಿ ಜಾಹ್ನವಿಯೊಳುತ್ತಮೆಯರಾರೆನಲ್ಕಸದಳವಲಾ ||

ಕೇಳಿತಿಳಿದವರುಂಟೆ ಹರಿ ಹರವಿಭೇದಮಂ
ಪೇಳುವರೆ ಭಿನ್ನಮಂ ಲಕುಮಿ ಸರಸತಿಯರೊಳು
ಭೂಲೋಕದೊಳ್ ಸಪ್ತ ಸಾಗರಕೆ ಮಿಗಿಲುಂಟೆ ಪರಮದಾಶ್ಚರ್ಯವಿದುವೆ|
ಮೇಳದಿಂ ಯಾತ್ರೆಯಂ ಗೈಯುವರ್ ಸುರನದಿಗೆ
ಸಾಲಿನಿಂ ಸಾರುವರು ಕಾವೇರಿ ಯಾತ್ರೆಗುಂ
ಮೇಲಿನಿಂ ಮಜ್ಜನವ ಹೃತಿಗೆಯ ಗೈದಪರು ಭರದೊಳೀ ವಾಹಿನಿಗಳೊಳ್ ||

ಸಂದೇಹ ಮೂಡಿದುದು ಸರ್ವ ಜನ ಹೃದಯದೊಳ್
ಬಂಧಿಸಿತು ಸುರಮನವ ತಿಳಿಯದಾದರು ಮುಂದೆ
ಇಂದುವದನೆಯರಲ್ಲಿ ಪರಿಶುದ್ಧರಾದವರು-ಆರೆಂದು ಮೂಲೋಕದಿ |
ಅಂದು ನೀರೆಯರೊಳು ವಿವಾದವಾಗಲ್ಕೆ ಬಲು
ಮಂದಿಯಂ ಮರುಗಿಸಿತು, ಸೊರಗಿಸಿತು, ಕೊರಗಿಸಿತು
ಇಂದಿವರ ಪಾವಿತ್ರ್ಯ ಪರಿಕಿಸಲ್ ಸುಲಭನಾರೀರೇಳು ಲೋಕದೊಳಗೆ ||

ಈ ವಿವಾದವ ಮುಂದೆ ಪರಿಹರಿಸಲೋಸುಗಂ
ಕಾವೇರಿ-ಭಾಗೀರಥಿಯರೀರ್ವರುಂ ನಡೆದು
ಸೇವಿಸಲ್ ನಾಲ್ಮೊಗನ ಲೋಕ ಕೈದಿದರವರು ಮನದೊಳಾತುರಗೊಳ್ಳುತ|
ತೀವಿದತಿಶಯದಿಂದ ಹೂವ ಪೀಠನು ಬೇಗ
ಲಾವನಿತೆಯಿರ್ವರಂ ನುಡಿಸಿದನು ಪದುಳದಿಂ
ಭಾವಿಸಿದ ಮನದಲ್ಲಿ ತರುಣಿಯರ ಹೃದಯದೊಳು ಹುದುಗಿರುವ
ಸಂದೆಗವನು ||

ಸತ್ಯಲೋಕಕೆ ಬಂದು ಸಾಷ್ಟಾಂಗವೆರಗಿದರ್
ಅತ್ಯಧಿಕ ಭಕ್ತಿಯಿಂ ಭೂ ಸೃಷ್ಟಿ ಕರ್ತನಿಗೆ
ಬಿತ್ತರಿಸಿ ಸುರಮುನಿಯ ತಂತ್ರವಚನವನಾಗ ಮೌನದಿಂದಿದ್ದರವರು |
ಸ್ತುತ್ಯನಾರಿಯರೆಂದ ನುಡಿಯನಾಲಿಸಿ ತಾತ
ಮತ್ತೆ ಕೇಳಿದ ಸಭೆಯ ಹಾರುವರ ಗಡಣವಂ
ಸ್ತುತ್ಯರಿವರೊಳಗಾರು ಪೇಳ್ವುದೀಗಲೆ ತಿಳಿಯುತವರವರ ಮಹಿಮೆಯನ್ನು||

ಆಲಿಸುತಲೀ ನುಡಿಯ ವಿಪ್ರಗಣ ಸೋಲುತ್ತ
ತಾಳಿದುದು ಮೌನಮಂ ತಿಳಿಯಲಾರದೆ ಮನದಿ
ಕೇಳುತ್ತ ಹೇಳುತ್ತ ತರ್ಕಮಂ ಗೈಯುತ್ತಲಾರಧಿಕ ಮೆಂದರಿಯದೆ |

ಹೇಳಲಾರದೆ ನಿಜವ ಸೋಲುತ್ತ ಮನದೊಳಗೆ
ಕಾಳಾಹಿವೇಣಿಯರ ಮಹಿಮೆಯಂ ಬಣ್ಣಿಸಲು
ಕಾಳಾಯ್ತು ಸರ್ವರಿಗು ತಲ್ಲಣಿಸಿ ಮನ್ನಣೆಯ ಬೇಡಿದುದು ವಿಪ್ರಾಳಿಯು||

ಭುವನದೊಳಗೀ ಪುಣ್ಯ ವಾಹಿನಿಯರೀರ್ವರುಂ
ಬುವಿಯಲ್ಲಿ ಪಾಪಮಂ ದಹಿಸಿ ಸಗ್ಗದಿ ಒಟ್ಟಿ
ಇವರಿತ್ತು ಪೊರೆಯುವರು, ಸಮವೆನಿಸೆ, ಪಾಪನಾಶಿನಿಯೆಂಬ
ಬಿರುದಿವರ್ಗೆ |
ಸವೆಯುವರ್ ಮಾಯಮಂ, ಸುಜ್ಞಾನ ತೇಜಮಂ
ನವವಿಧದ ಭಕ್ತಿಯಂ ಪರಮಾತ್ಮ ಸನಿಯಮಂ
ಜವದಿಂದಲೀಯುವರು ಸಂಸಾರ ಪಾಶಮಂ ಕಡಿದೊಗೆದುಸಾರ್ವಕಾಲ ||

ಮುಳುಗಿದರ ಮನದೊಳಗೆ ಹುದುಗಿರುವ ಕಲ್ಮಷವ
ನೆಳೆಯುತ್ತ ತೊಳೆಯುತ್ತ, ಪಾವನೋದಕವನ್ನು
ಬಲುಮುದದಿ ಕುಡಿದವರ ಮುಕ್ತಿಗೇರಿಸಿ ಮುಂದೆ ಜನನಮರಣದಕೂಪದಿ|
ಬಿಳದಂತೆ ಪೊರೆಯುವರು ಮರಣ ಕಾಲದೊಳಿವರ
ಹಲುಬಿದರೆ ಸಗ್ಗದೊಳಗೀಂಟಿದರೆ ವೈಕುಂಠ
ಸುಲಭವೆನಿಪುದವಂಗೆ ನಾರಿಯಿರ್ವರ ಮಹಿಮೆ ಪೇಳಲಸದಳಮಾಗಿದೆ ||

ಕುರುಡಂಗೆ, ಕಿವುಡಂಗೆ, ಕಣ್ಗಳಂ, ಕಿವಿಗಳಂ
ಕರರಹಿತ ಹೆಳವಂಗೆ ಕರಕಾಲ್ಗಳನ್ನಿತ್ತು
ಅರಿಯದನಿಗಜ್ಞಾನ ಹರಿಸುತ್ತ, ಮೂಕನಿಗೆ ನುಡಿಯಲ್ಕೆ ಶಕ್ತಿಯಿತ್ತು |
ಪರಿಹರಿಸಿ ರೋಗದೊಳ್ ಬಿದ್ದು ಪರಿಪರಿಯಿಂದ
ನರಳುತಿಹ ಮನುಜರ್ಗೆ ರೋಗಬಾಧೆಯಪರಿಸಿ
ಪೊರೆಯುವರು ಮುಳುಗಲ್ಕೆ ಕುಡಿಯಲ್ಕೆ ಭಕ್ತಿಯಿಂ ಪರಿಶುದ್ಧ
ಜಲಬಿಂದುವಂ ||

ಹಳಿದವರು ಹರಿಹರರ ಭೇದಮಂ ಗೈದಂತೆ
ತುಳಿದವರು ಶಿವಲಿಂಗ ಭೇದಿಸಿದ ದೋಷಮಂ
ಮುಳಿಯುತಲಿ ಮುಳುಗದೊಡೆ ಮುಕ್ತಿನಾಶವ ಪೊಂದಿ
ರೌರವದಿನರಳುತಿಹರು |
ಕಳೆಯುವರು ಸಂಚಿತದ ಪುಣ್ಯಮಂ ಮಿಾಯದೊಡೆ
ಸೆಳೆಯುವರು ಹಿರಿಯರಂ ತಮ್ಮೆಡೆಗೆ ತಾಂ ಗೈವ
ಛಲದಿಂದ ಜರೆಯುತ್ತ ಮರೆಯುತ್ತ ಪರಿಶುದ್ಧವನಿತೆಯರ ಲೋಕದಲ್ಲಿ ||

ಭಾವಿಸಲ್ ಮನದೊಳಗೆ ಶಕ್ತಿಯಿಂ ಭಕ್ತಿಯಿಂ
ಸೇವಿಸಲ್ ಮುದದಿಂದ ಧರ್ಮದಿಂ ಮರ್ಮದಿಂ
ದಾವಗಂ ನದಿಯೊಳಗೆ ಕಾಯಮಂ ಮಾಯಮಂ ತೊಳೆಯುವರ
ಕರುಣದಿಂದ |
ಈವನಿತೆ ಈರ್ವರುಂ ಭಕ್ತಿಯಂ ಮುಕ್ತಿಯಂ
ದೇವಾರದೊಳ್ ದಿವ್ಯ ದೇಹಮಂ ನೇಹಮಂ
ಶ್ರೀವಾಸ ವೈಕುಂಠವಾಸಮಂ ಸಾಸಮನ್ನೀಯುವರ್ ಪದುಳದಿಂದ ||

ಇವರೀರ್ವರುಂ ಪರಮ ಪರಿಶುದ್ಧರಾದವರ್
ಇವರೀರ್ವರುಂ ಜಗದಿ ಪುಣ್ಯವಾಹಿನಿಯೆನಿಸಿ
ಬುವಿಯೊಳಗೆ ಧನಧಾನ್ಯ ಸಂಪದವ ನೀಯುತ್ತಲಕ್ಷ್ಮಿಯ್ಯ ಜನನಿಬಿಡದಿ |
ಇವರೀರ್ವರೆಡೆಯಲ್ಲಿ ಹರಿಹರರು ನೆಲೆಸಿಹರು
ಇವರೀರ್ವರಂ ನೀನೆ ಸೇವಿಸುವೆ ಮುದದಿಂದ
ಇವರಲ್ಲಿ ಸುರರೆಲ್ಲ ಮಿಾಯುವರು ನನ್ನಿಯಿಂ, ಮಿಗಿಲುಂಟೆ ನಾರಿಯರೊಳು||

ಆಲಿಸು ಪಿತಾಮಹನೆ ಹೇಳಲಾರೆವು ನಾವು
ಈ ರಮಣಿಯರ ಮಹಿಮೆ ಹದಿನಾಲ್ಕು ಲೋಕದೊಳು
ಸಾರುತಿರೆ ಶ್ರುತಿಯಂತೆ ದೇವಾಂಶದಿಂ ಧರೆಯ ಪಾಲಿಸಲ್ ಪ್ರವಹಿಸಿದರು|

ಬೇರೇನು ಪೆರ್ಚಿಲ್ಲವಿವರೀರ್ವರೊಳು ಭಿನ್ನ
ಪಾರವಿಲ್ಲೈ ತಾತ ಗುಣಮೇಕವಿವರೊಳಗೆ
ವೀರ ಮಾತೆಯರಿವರು ಪೇಳುವುದು ಮಹಿಮೆಯನ್ನೆಮಗೀಗಲೆಂದರವರು ||

ಇಂತೊರೆದ ವಿಪ್ರರಂ ನೋಡಿ ಕಮಲಾಸನಂ
ಸಂತಸದಿ ಮನ್ನಿಸುತ ಪೇಳ್ದನೀ ಪರಿಯಿಂದೆ
ಪಿಂತೆ ಜಾಹ್ನವಿ ನಾಕದಿಂ ಬಂದು ತಿರೆಯನ್ನು ಪಾವನವಗೈದ ಬಗೆಯ|
ಕಂತುಪಿತನುಂಗುಟದೊಳೊಗೆದ ಗಂಗಾದೇವಿ
ಚಿಂತಿಸಿದ ಭಾರತ ಭಗೀರಥನಿಗೊಲಿಯುತ್ತ
ಪಂಥವಂ ಸಲಿಸಲ್ಕೆ ಸಗ್ಗದಿಂ ಧುಮುಕಿದಳು ಪ್ರೇಮದಿಂ ಭಾಗೀರಥೀ ||

ಈರೇಳು ಲೋಕದೊಳ್ ಪರಮ ಪಾವನೆಯೆನಿಸಿ
ಧಾರುಣಿಯ ಜನರಿಂದೆ ಸೇವೆಯಂ ಸ್ವೀಕರಿಸಿ
ಸಾರಸಾಕ್ಷನ ದಿವ್ಯ ಸಾಯುಜ್ಯಮನ್ನಿತ್ತು ಮುಕ್ತಿಪಥವನ್ನೀಯುತ |
ಭೂರಮಣ ಸಗರನೃಪ ಕುವರರಂ ಕಪಿಲಮುನಿ
ಶೌರಿಯದಿ ದಹಿಸಲ್ಕೆ ಮುಕ್ತಿ ಪಥಕೇರಿಸಲ್
ಮಾರ ಸೋದರಿ ಪರಿದಳರುವತ್ತು ಸಾಸಿರದ ಕುವರರ್ಗೆ ಮೋಕ್ಷವಿತ್ತು ||

ಆ ಸಗರ ಪುತ್ರರಿಗೆ ಮೋಕ್ಷದಾಯಿನಿ ಗಂಗೆ
ಮಾಸಿದಳು ಕಲುಷಮಂ ಮುಕ್ತಿಯೀಯುತಲಂದು
ಈ ಸಲಿಲದೊಳ್ಮಿಂದ ಮಾನವರಿಗತಿಶಯದ ಪದವಿಯಂ ನೀಡುತಿಹಳು |
ಸಾಸದಿಂ ನದಿಯಾಗಿ ಪರಿದಳೀ ಕಾವೇರಿ
ಶೇಷಶಯನನ ಪೊಂದಿ ಸುತೆಯಾದೊಡೆನಗೆಯುಂ
ಈ ಸುದತಿ ತಾಯಾಗಿ ಬಂದಿಹಳು ಜಗದಲ್ಲಿ ಮೇಲಾಗಿ ಶಿವನಸತಿಯು ||

ಕೇಳು ಗಂಗಾದೇವಿ ಜಗದೊಳಿಹ ನದಿಗಳೊಳು
ಶೀಲದಿಂ ಪಾವನಳು ನೀನು ಪರಮ ಪವಿತ್ರೆ
ಮೇಲಾದ ನಿನಗಿಂತ ಪಾವನಂ ನಾನಿರುವೆ ಮೆರೆವೆ ಮೂಲೋಕದೊಳಗೆ |
ಬೀಳುವಳ್ ಸಿರಿಪತಿಯ ಚರಣ ಸೇವೆಯನಿವಳು
ಪೇಳಲೇಂ ! ನಿನಗುಮೆನಗುಂ ಮಾತೆಯೀವನಿತೆ
ಮೇಲಾದೊಡೇಂ ನೀನು, ದುರಿತನಾಶಿನಿ ನೀನು ದುರಿತದೂರಳು ಶಿವಸತಿ ||

ಆ ಕಮಲವಾಸಿನಿಯ ತಪದಿಂದ ಮೆಚ್ಚಿಸುತ
ಲೀ ಕಿಶೋರಿಯ ಪಡೆದೆನತಿಹಿತದಿ ಪಾಲಿಸಿದೆ
ನೀಕೆ ಲಕ್ಷ್ಮೀ ಸದೃಶವಾಗಿಹಳು ಸಿರಿವಂತೆ ಮಗಳೆ ಲೋಪಾಮುದ್ರೆಯು|
ಲೋಕಮೋಹಕಮಾದ ಸೌಂದರ್ಯಮಂ ಕಂಡು
ಮೂಕರಾದರು ಮೂರು ಮೂರ್ತಿಗಳು ಮೋಹದಿಂ
ಬೇಕೆಂದು ಬಯಸಿದರು ಬೇಡಿದರು, ಕಾಡಿದರು ಸೋಲುತ್ತಲೀ ತರಳೆಗೆ ||

ರೂಪುಗುಣವೆರಡರಿಂ ಗುಣವಂತೆ ಸಿರಿವಂತೆ
ಈ ಪರಮ ಪಾವಿತ್ರ್ಯವರವನಿತೆ ಭಕ್ತಿಯಿಂ
ದಾ ಪಾರ್ವತೀ ಪತಿಯ ತಪದಿ ಮೆಚ್ಚಿಸಿ ಪತಿಯ ಪಡೆದಳಾ
ಕಾಂತನನ್ನು |
ರೂಪುಜವ್ವನದಿಂದೆ ಪೊಳೆಯುತಿಹ ಕನ್ನೆಯ
ನ್ನಾ ಪವಿತ್ರನು ಕಂಡು ಮೋಹದಿಂ ಕೈವಿಡಿದು
ತಾಪಸಂ ಕುಂಭಜಂ ಪ್ರೀತಿಯಿಂ ವರಿಸಿದಂ ಪಡೆದು ಲೋಪಾಮುದ್ರೆಯ||

ಕಮಲಜನ ನುಡಿಗಾಗ ವಿಪ್ರಗಣಕೇಳಿದುದು
ಕಮಲಮುಖಿ ಜಗಕೆಂತು ಬಂದಳಾವ ಪರಿಯಲಿ
ಕಮಲನಾಭನ ರಾಣಿಯಾದಳೆಂತುಟು ಪೇಳು ನಲ್ಗತೆಯನೆಮಗೆ ಮುದದಿ|

ಸುಮತಿಲೋಪಾಮುದ್ರೆ ಕಾವೇರಿನದಿಯೆನಿಸು
ತಮರ ನದಿಯಂ ಮೀರಿ ಪರಿಶುದ್ಧಿಯೆನಿಸಿದಳು
ಸುಮನಸೆಗೆ ಮೂಲೋಕದೊಳ್ ದೊರೆತ ಕೀರ್ತಿಯಂ
ಪೇಳೆಂದೊಡಿಂತೆಂದನು ||

ಕಂದರಿಲ್ಲದ ದುಃಖದಿಂ ಬೆಂದು ತಪಗೈದು
ಕಂದನಂ ಬೇಡಿದನು ಪಿಂತೆ ಮೌನಿ ಕವೇರ
ಅಂದು ನಾ ಸಂತೋಷದಿಂ ವನಿತೆಯನ್ನಿತ್ತೆ ಸುತೆಯಾಗಿ ಮೌನಿಪತಿಗೆ |
ಅಂದಿವಳು ಬಯಸಲ್ಕೆ ಲೋಕ ಸೇವೆಯ ಮಾಡೆ
ಚಂದದಿಂ ವರಗಳಂ ಬೇಡಿದಳು ನದಿಯಾಗೆ
ಬಂದು ವರಗಳನಿತ್ತು ಹರಿಹರರು ಹರಸಲ್ಕೆ ಶೋಭಿಸಿದಳೀ ಕುವರಿಯು ||

ವರಗಳನ್ನೀವಾಗ ಸಿರಿಪತಿಯು ನುಡಿದಿಹನು
ಪರಿದು ಲೋಪಾಮುದ್ರೆ ಕಾವೇರಿ ನದಿಯಾಗಿ
ಬರುತಿರಲು ಸೇರುವೆನು ನಿನ್ನ ನಾಂ ಶಿವಲಿಂಗಕ್ಷೇತ್ರದೊಳ್ ಪದುಳದಿಂದ|
ನರಲೋಕದೊಳ್ ಪರಿದು ಸುರಲೋಕಮಂ ತೋರಿ
ಪೊರೆವೆ ಸಂಶಯಮಿಲ್ಲ ಭಕ್ತರಂ ಪಾಲಿಸುವೆ
ಸುರನದಿಗೆ ಮಿಗಿಲೆನಿಸಿ ಮೆರೆವೆ ನೀ ಲೋಕದೊಳ್ ನೀಂ
ಪ್ರಾಣಕಾಂತೆಯೆನಗೆ ||

ಎಂದಭಯವಿತ್ತಿಹನು ಮಮಕಾರಮಂ ತ್ಯಜಿಸು
ಬಂದಿವಳ ಕೂಡಿದೊಡೆ ಜಗದ ಜೀವಿಗಳಿಂದ
ಪೊಂದಿರುವ ಪಾಪರಾಶಿಯ ಕಳೆದು ಪರಮಪಾವನೆಯಾಗಿ ಪೊಳೆವೆ ನೀನು|
ಚಂದದಿಂದೀ ಚರಿತೆ ಕೇಳಿದರೆ ಮೋಕ್ಷಮಂ
ಪೊಂದುವರು ಧರೆಯಲ್ಲಿ ಆರೆರಡುವತ್ಸರದಿ
ಬಂದು ಕಾವೇರಿಯಂ ಕೂಡಿ ಪಾವನಳಾಗು ಸಿರಿಗಂಗೆ ಭೂಲೋಕದಿ ||

ಶ್ರೀರಮಣ ಸುಂಗುಟದೊಳೊಗೆದೆನೆಂಬೀ ಗರ್ವ
ಸಾರವಿಲ್ಲೌ ತರುಣಿ ಲೋಕಮಂ ಸೃಜಿಸುವೆನ
ಗೀ ರಮಣಿ ಕುವರಿಯಾಗಿರ್ದೊಡಂ ತಾಯೆನಿಸಿಕೊಂಡಳೀ ಭರತಮಾತೆ |
ಪಾರವಿಲ್ಲೌ ಇವಳ ಪಾವನತ್ವಕೆ ಜಗದಿ
ಸೇರುತ್ತಲೀ ತರುಣಿಯಂ ಪ್ರೀತಿಯಿಂದಲಾ
ಗೌರೀಶ ನೆಲಸಿಹನು ಕಾವೇರಿ ತೀರದೊಳ್ ಆದ್ಯಂತ ಪರ್ಯಂತವು ||

ಬಿಡಲಾರದಿವಳನ್ನು ಹರಿಹರರ್ವೆರಸಿ ನಾಂ
ಬುಡದಲ್ಲೆ ನಿಂತಿರುವೆ ಸಾನ್ನಿಧ್ಯದೊಳ್ಬಂದು
ಮೃಡ ಸತಿಯು ಅಕ್ಷಯದ ಜಲಪಾತ್ರೆಯಿಂ ಪರಿಯೆ
ಲೋಕೋಪಕಾರಿಯಾಗಿ |
ಇಡಲು ಪಿಂಡವ ನಿಲ್ಲಿ ಪೈತೃಕಂಗಳ ಗೈಯೆ
ಬಡಗ ದೇಶದ ಗಯೆಯು ಹೈತಿಗೆಗೆ ಮಿಗಿಲೆನಿಸಿ
ಕೊಡುವುದಕ್ಷಯ ಮೋಕ್ಷವನ್ನು ವೈಕುಂಠದೊಳ್ ತೊಳೆದು
ಭವಭಯಕಷ್ಟವ ||

ಅರಿತು ಶ್ರೀ ಕಾವೇರಿ ಮಹಿಮೆಯಂ ಬುಧರೆಲ್ಲ
ಸ್ಮರಿಸಿ ಮಾಹಾತ್ಮ್ಯವಂ ತುತಿಗೈದು ಕಮಲಜನ
ಹರಿಸುತೆಯು ಕೊಂಡಾಡಿ ಮಣಿದು ಸಿರಿಹರಿ ಸತಿಗೆ ಸಂತೋಷದಿಂ
ಪೊಗಳುತ |
ತೊರೆದು ಸಂದೇಹಮಂ ನೆರೆದಿರ್ದ ವಿಪ್ರಾಳಿ
ಬರುತ ಸಹ್ಯಾದ್ರಿಯೊಳು ನೆಲಸಿದರು ಪದುಳದಿಂ
ಹರಿಹರ ಬ್ರಹ್ಮಾದ್ಯರಂ ಸೇರಿ ತಪಸಿನೊಳ್ ಕಳೆಯುತ್ತ ಸಮಯವನ್ನು ||

ಕಮಲ ಪೀಠನ ವಚನಮಂ ಕೇಳಿ ವಿಪ್ರಾಳಿ
ಕಮಲಾಕ್ಷಿ ಕಾವೇರಿ ಮಹಿಮೆಯನ್ನೊಪ್ಪಿದರ್
ಅಮಿತಮಾಹತ್ಮ್ಯಳಿವಳೆಂದು ತುತಿಗೈಯುತಿರೆ ನೆನೆನೆನೆದು ಮಾತೆಯನ್ನು |

ನಮಿಸಿದಳು ಜಾಹ್ನವಿಯು ಜನರೆರೆದ ದುರಿತಗಳ
ನಮಲತ್ವದಿಂ ತೊಳೆದು ಸಲಹೆಂದು ಬೇಡಿದಳು
ಸುಮತಿ ಕಾವೇರಿಯನ್ನಪ್ಪಿದಳು ಪದುಳದಿಂ ಶೋಧಿಸುತ ಸಾಧನೆಯನು ||

ಅಜನೊರೆದ ನಲ್ಗತೆಯು ನನ್ನಿಯಿಂ ಮೂಡಿದುದು
ಸುಜನರೆದೆಯರಳಿಸುತ ಭಕ್ತಿ ಮಧುವನು ತಂದು
ಬಿಜಯ ಮಾಡಿಸುತಿಹುದು ನಿನ್ನೆಡೆಗೆ ಜೀವನ ಸುಧಾರಸವ ಸೇವಿಸಲ್ಕೆ |
ದ್ವಿಜವಂಶದೊಳಗುದಿಸಿ ದೇವದೇವತೆಯಾದೆ
ಕುಜನರೆದೆಯಂ ಬಿರಿಸಿ ಸೂನೃತವನೆರೆವೆ ನೀ
ನಿಜವರಿಯಲಾವನಿಗೆ ಸುಲಭವೋ ಕಾವೇರಿ ಪಾದಾಬ್ಜಗಳಿಗೆ ಶರಣು ||

ಸಂತಸದಿ ಹಾಡುತ್ತ ಕಾವೇರಿ ಮಹಿಮೆಗಳ
ಸಂತರೆಲ್ಲರು ಕೂಡಿ ಪೊಗಳುತ್ತ ಗಂಗೆಯಂ
ಸಂತೋಷದಿಂ ಕರೆದು ನಾರದನ ಹರಿಸಿದರು ದಿವ್ಯ ಚರಿತೆಯ ಕೇಳುತ |
ಇಂತೊಗೆದು ಶ್ರೀರಾಮವಿಠ್ಠಲನ ಸತ್ಸಂಗ
ವಂ ತಾನು ಪೊಂದುತ್ತ ಸುರಗಂಗೆ ನೇಹದಿಂ
ದಂತರಂಗದಿ ನೆನೆದು ಕುಂಭಜನ ಕಾವೇರಿ ನಡೆದಿಹಳು ಕೀರ್ತಿಯಿಂದ ||

---

# ೩. ಭೂಲೋಕಾಗಮನ.

ಪಡುವ ಘಟ್ಟದ ಮೇಲೆ ಕೊಡಗು ಭೂಮಿಯು ಪೊಳೆಯೆ
ಸುಡುಸುಡುವ ರಾಜ್ಯದಿಂ ದೂರಮಾಗಿರಲಿಕ್ಕೆ
ಎಡಬಿಡದ ಬರಿಸದಿಂ ಕಡಲಿಡುವ ನದಿಗಳಿಂ ಗಿರಿವೆಟ್ಟಕಂದರಗಳಿಂ |
ಅಡವಿಯಿಂ ರಾಜಿಸುವ, ವೃಕಸೂಕರಾದಿಗಳ್
ಜಡಮಿಗಗಳಿಂ ಕೂಡಿ ರಂಜಿಸುವ ರಾಜ್ಯದೊಳ್
ಮೃಡಪತಿಯ ಮಂದಿರದ ತೆರದಂತೆ ಶೋಬಿಸುವದೀ ಕೊಡಗು ಬೆಡಗಿನಿಂದ||

ತಾಪಸರು ಜಾನಿಸಲ್ಕೇಕಾಂತದೊಳು ಕುಳಿತು
ಆ ಪದುಮನಾಭನಂ ಮೌನದಿಂ ಪೂಜಿಸಲ್
ಶ್ರೀಪತಿಯು ಸೃಜಿಸಿದನು ಸುಖವಾಸಗಳನಿಲ್ಲಿ ಸೌಂದರ್ಯಶಿಖರಗಳನು |
ಕಾಪುರುಷರಿಂ ದೂರಮಾಗಿರಲು ಗವಿಗಳಂ
ಪಾಪಮಂ ನೂಂಕಲ್ಕೆ ಕಡಿದಾದ ಬೆಟ್ಟಗಳ
ಭೂಪರಂ ಪೊರೆಯಲ್ಕೆ ಕೊಡಗಿನೊಳ್ ಕಟ್ಟಿಹನು ಭದ್ರಕೋಟೆಯ
ಮುದದೊಳು ||

ಅಲ್ಲಲ್ಲಿ ಬೆಟ್ಟಗಳು ಸೌಭಾಗ್ಯರಾಶಿಯಿಂ
ದಲ್ಲಲ್ಲಿ ತರತರದ ಫಲಮೂಲ ತರುಗಳಿಂ
ದಲ್ಲಲ್ಲಿ ಪರ್ವತವನಾಶ್ರಯಿಸಿ ನಿಂದಿರುವ ತರುಮೂಲ ಸರಣಿಗಳನು |
ಖುಲ್ಲರಂ ಚೆಲ್ಲಿಡುವ ವೀರನೃಪತಿಗಳಂತೆ
ಒಳ್ಳಿದರ ರಕ್ಷಿಸುವ ಶೂರ ಭೂಪತಿಯಂತೆ
ಚೆಲ್ವಾಗಿ ನಿಂದಿರುವ ಪರ್ವತಶ್ರೇಣಿಯಿಂ ಶೋಭಿಸಲು ಕೊಡಗುಮಾತೆ ||

ಸಾರಂಗ ಮಾತಂಗ ಚಿರತೆ ಸಿಂಹಾದಿಗಳ್
ಭೋರಿಡುವ ಹುಲಿ ಕರಡಿ ನರಿನಾಯಿ ಕಪಿಗಳಿಂ
ದೀರಾಜ್ಯದಾರಣ್ಯದಾರಾಮ ವಾಸ ಮೆಂದೆನಿಸಿಹುದು ಸಿಂಗರದೊಳು|
ಘೋರ ವಿಪಿನದಿ ಕ್ರೂರ ಸರ್ಪಾಳಿ ನೆಲಸಿರಲ್
ಸೇರಿಹವು ಮಹಿಷಗಳ್ ತಿವಿದು ಬೆಟ್ಟಂಗಳಂ
ಧಾರುಣಿಯನಗೆಯುತಿಹ ಸೂಕರಾದಿಗಳಿಂದ ತುಂಬಿಹುದು
ಕೊಡಗುರಾಜ್ಯ ||

ಬೆಟ್ಟದೊಳ್ ಪುಟ್ಟಿರುವ ತೊರೆಯಿಂದೆ ಕೆರೆಯಿಂದೆ
ಕಟ್ಟಿರುವ ಕೊಳಗಳಿಂ ಜಲದಿಂದ ತುಂಬಿರುವ
ಘಟ್ಟದಿಂದೋಡುತಿಹ ಸೌಂದರ್ಯ ನದಿಗಳಿಂ ಕಾನನಂ ಶೋಭಿಸುವುದು |
ಕಷ್ಟದಿಂ ಪಾರಾಗಿ ದುಷ್ಟರಿಂ ದೂರಾಗಿ
ತುಷ್ಟಿಯಂ ಪಡೆಯಲ್ಕೆ ಹರಿಯ ಸಾನ್ನಿಧ್ಯಮಂ
ಸೃಷ್ಟಿಯೊಳ್ ಬಯಸುತಿಹ ನರರಂತೆ ಘಟ್ಟಮಂ ಬಿಟ್ಟೋಡಿ ಪೋಗುತಿಹವು||

ಊರ ಜನರೆಲ್ಲರಿಗೆ ಪೈರು ಪಚ್ಚೆಯ ಕೊಡಲು
ಊರುಗಳ ನೋಡುತಲಿ ನೀರನೀಯಲು ಬೇಗ
ಸಾರ ಸುಖಗಳನೀಯೆ ಬೆಟ್ಟದಿಂ ನದಿನದವು ಮೈದಾನಕೋಡುತಿಹವು |
ಶೌರ್ಯದಿಂದರಿಗಳಂ ಬೆಂಬತ್ತಿ ಸೆರೆಯಿಡಲ್
ವೀರಯೋಧರ ತೆರದಿ ಖಳಖಳನೆ ಝಳಪಿಸುವ
ಶೂರ ಖಡ್ಗದ ನಿನದ ಗೈಯುತ್ತಲೋಡುತಿವೆ ಸಾಸಮಂ ತೋರುತ್ತಲಿ ||

ಊರೊಳಗೆ ಜನನಿಬಿಡಮಾಗಿರುವ ಕೇರಿಯಿಂ
ಕೇರಿಯೊಳ್ ಸಿರಿಪತಿಯ ಪೂಜಿಸುತ ಸಂಧ್ಯಾದಿ
ಕಾರಿಯದಿ ಮಗ್ನರಾಗಿರುತಿರುವ ಭೂಸುರರ ಮಂತ್ರ ಘೋಷಂಗಳಿಂದೆ |

ಬಾರಿ ಬಾರಿಗು ನಮಿಸಿ ನುತಿಸುತಿಹ ಭಕ್ತರಿಂ
ಶೂರಯೋಧರ ಕೊಡಗು ಜನನಿಬಿಡವಾಗಿಹುದು
ಶೌರಿಯಂ ಭಜಿಸುತಿಹ ಸಾಧುಗಳಿಗಾವಾಸವೀ ಕೊಡಗು ಸಾಮ್ರಾಜ್ಯವು॥

ಕ್ಷೀರವಂ ಧಾರೆಯೊಳ್ ಕರೆದು ಪುಷ್ಟಿಯನಿತ್ತು
ಧಾರುಣಿಯು ನೇಗಿಲಿಂದೆಳೆದು ಪೈರನು ಬೆಳೆದು
ಧಾರುಣಿಗೆ ಜೀವನವ ನೀಡುತಿಹ ಪಶುಗಳಿಂ ತುಂಬಿಹುದು ಮಿಗಗಳಿಂದೆ।
ಸಾರತರ ಮಧುರಗಾನಂಗಳಿಂದಿಂಪಿನಿಂ
ಚೀರಿಡುವ ವಿಹಗಗಳಿಗಾಶ್ರಯವ ನೀಡಿಹಳ್
ಶ್ರೀರಮಣಿಯಂತಿಹುದು ಪಶುಪಕ್ಷಿಗೀನಿಲಯ ಸಗ್ಗಕುಂ ಸೌಖ್ಯವಾಗಿ ॥

ಹರಿಹರರು ನೆಲಸಿಹರು ಬೆಟ್ಟಂಗಳೊಳ್ ಬಂದು
ಚರಣಾರವಿಂದವಂ ಸೇವಿಸಲ್ ಸಾಧುಗಳು
ತೊರೆಯಲಾರದೆ ಸಪ್ತ ಋಷಿಗಳೆಲ್ಲರು ಸಾರಿ ಸಹ್ಯಾದ್ರಿಯಲ್ಲಿ ನಿಂದು ।
ಹರಿಹರರ ಸಾನ್ನಿಧ್ಯದೊಳಗಿದ್ದು ಪರಬೊಮ್ಮ
ಸುರಲೋಕಕುಂ ಮಿಗಿಲು ಕೊಡಗು ಬೆಟ್ಟದಿ ಬಂದು
ಸುರರೊಡನೆ ನೆಲಸಿದನು ಸತ್ಯಲೋಕವ ತೊರೆದು ಬಹುಭಾಗ್ಯವಂ ಮರೆಯುತ ॥

ಬೆಡಗಿಡುವ ಕೊಡಗಿನೊಳ್ ಪಡುವರಂಗದಿ ನೋಡೆ
ನಿಡಿದಾಗಿ ನಿಂದಿರುವ ಸಹ್ಯಾದ್ರಿ ಬೆಟ್ಟವೇಂ
ಕಡಲಿನಿಂ ಮೇಲೇರಿ ನಿಡಿದಾಗಿ ಮೆರೆಯುತಿದೆ ಪಶ್ಚಿಮಾಂಬುಧಿಯ ನೋಡೆ।
ಕಡುತವಸಿಗಳ್ಬಂದು ಏಳುರಿಷಿಗಳ್ ನಿಂದು
ಜಡವಾದ ಶಿಖರದೊಳ್ ಶಾಂತಿಯಂ ಬೆಳಗಿಸುತ
ಉಡುರಾಜ ಶೇಖರನ ಜಾನದಿಂ ನೆಲಸಿಹರು ಪದುಳದಿಂ ಸರ್ವಕಾಲ ॥

ಶ್ರೀರಮಣನಾಮಲಕ ವೃಕ್ಷಾವತಾರದಿಂ
ದೀರತುನ ಮಯನಗದಿ ನಿಂದಿರಲು ಕಮಲಜನು
ಭೂರುಹವ ಪೂಜಿಸಲ್ ವಾರಿಯನ್ನರಸುತಿರೆ ಕಾಣದಿರೆ ತೀರ್ಥಕುಂಡ |
ತೋರದಿರೆ ರಚಿಸಿದಂ ವಿರಜೆ ತೀರ್ಥವನಾಗ
ಮಾರಸೋದರ ಭಕ್ತಿಯಿಂ ಭಜಿಸಿ ಮೋದದಿಂ
ಶ್ರೀರಮಣ ಕೀರ್ತನದಿ ಸಹ್ಯಾದ್ರಿಯಂ ಶ್ರೇಷ್ಠ ಪರ್ವತವ ಗೈದನಂದು ||

ಯಾತ್ರೆಯಂ ಗೈಯುತಲಿ ಕಲಶಜಂ ಆ ಗಿರಿ
ಸ್ತೋತ್ರಮಂ ಕೇಳುತ್ತಲೈತಂದ ನೋಡಲ್ಕೆ
ಧಾತ್ರಿಯೊಳ್ ಶೋಭಿಸುವ ಪರ್ವತ ಶ್ರೇಣಿಯಂ ಪೊಗಳುತ್ತ ಬಂದುನಿಂದು |
ಶ್ರೋತ್ರಿಯರಿಗನುಕೂಲವಾಗಿರುವ ಗಿರಿಯನ್ನು
ಆ ತ್ರಿಲೋಚನ ಭಕ್ತ ನಿರುಕಿಸಿದ ವರ ವಿರಜೆ
ಪಾತ್ರವನ್ನಾಮಲಕ ಭೂರುಹವ ನಿಜವರಿತ ಕುಂಭಜಂ ಜಾನದಿಂದ ||

ಹರಿವೃಕ್ಷವಾಗಿಹುದ ನಿರುಕಿಸಲ್ ಮುನಿಪತಿಯು
ಹರಿಯಂಘ್ರಿ ಕಮಲಮಂ ತೊಳೆಯಲ್ಕೆ ಜಲವನ್ನು
ನಿರುಕಿಸುತ ತಾತನಿದ ರಚಿಸಿ ಪೂಜಿಸಿದಂಥ ಜಲವೆಂದು ತಿಳಿದುಕೊಂಡು|
ಉರುತರದ ಗಿರಿಯಲ್ಲಿ ವಾರಿಯಂ ಕಾಣದಿರೆ
ವರ ಋಷಿಯು ಚಿಂತಿಸುತ ಮಜ್ಜನವ ಗೈಯಲ್ಕೆ
ಶರಪಾತ್ರವನ್ನಿರಿಸಿ ಮುಂದೆ ಪೋದನು ಹುಡುಕಿ ನುತಿಸಿ ಹರಿಪಾದ ಕಮಲ||

ಭಜಿಸಲ್ಕೆ ತೀರ್ಥಮನ್ನರಸುತ್ತ ಪೋಗೆ ಕುಂ
ಭಜನಾಗ ಚಿಂತೆಯಿಂ ಕೊಡವಿಡಲ್ ಗಿರಿಯಲ್ಲಿ
ಅಜನೋಡಿ ಸಿರಿಪತಿಯ ಸೇವೆಗೋಸುಗ ಜಲವ ರಚಿಸಲ್ಕೆ ಸಮಯವೆಂದು|

ಅಜಕೊಡವ ನುರುಳಿಸಿದ ವಾಯಸದ ರೂಪದಿಂ
ದಜ ಬಂದು ಸಹ್ಯಾದ್ರಿ ಮೂಲದೊಳ್ ಕುಂಡಮಂ
ನಿಜ ಪಾತ್ರೆಯೊಳ್ನೆರೆದ ವಿವಿಧತರ ತೀರ್ಥದಿಂ ಸೃಜಿಸಿದಂ ತೀರ್ಥಮೊಂದಂ||

ಮಾಯವಾಗಲ್ ಬ್ರಹ್ಮ ಬಂದು ಮುನಿ ನೋಡಿದಂ
ತೋಯಮಂ ನಿಜಕಮಂಡಲುವಿಂದ ಸೋರುತಿರೆ
ನೋಯುತ್ತಲೀ ಕಜ್ಜಗೈದವರ ಶಪಿಸಲ್ಕೆ ಜಲಬಿಂದುವಂ ಮಂತ್ರಿಸಿ |
ತೋಯಮಂ ಪಿಡಿದಿರಲ್ ಕಮಲಜಂ ಧರೆಗಿಳಿದು
ಮಾಯದಿಂ ತಾಂ ಬಂದು ಗೈದ ಹದನವನುಸುರಿ
ಪ್ರೀಯದಿಂ ಪೇಳಿದಂ ವಿರಜೆ ತೀರ್ಥದ ಮೈಮೆ ಪಾವಿತ್ರ್ಯ ಘನತೆಗಳನು||

ಬಿಡುಕೋಪ ತಡೆ ಶಾಪ ಪಿಡಿ ಶಾಂತಿ ಕಡು ತವಸಿ
ಜಡ ಮತಿಯನಡಗಿಸಲು ಕೊಡಗಿನೊಳ್ ನಿಡಿದಾದ
ಪಡುವಗಿರಿ ಸಡಗರದ ಬೆಡಗನ್ನು ನೋಡುತ್ತಲೆಡವಿದೆನು ಕೊಡವನಾನು |
ಅಡಿಯಿಡಲ್ ಬುಡ ಮಗುಚೆ ಪೊಡವಿಯೊಳಗುನ್ನತದ
ಕಡಲಂತೆ ಮಡುವಾಯ್ತು ಎಡಬಿಡದೆ ನೀರಿರಲು
ಕಡಗೋಲ ಪಿಡಿದಿಹನ ಮೃಡಮೂರ್ತಿಯಡಿಗಳಿಗೆ ಕೊಡಲು ಜಲ ಕಡಿದೆ
ನಿಲ್ಲಿ ||

ಎಡವಿ ಕೊಡವಂ ಬ್ರಹ್ಮ ಜಲಕುಂಡಮನ್ನಿಲ್ಲಿ
ಪಡುಶಿಖರದಡಿಯಲ್ಲಿನಿರ್ಮಿಸುತ್ತಲಿ ಮುಂದೆ
ಬೆಡಗಿಡುವ ಜಲಧಿಯನು ಕರುಣಿಸಿದೆ ಮುದದಿಂದ ಕೊಡಗು ಭೂಭಾಗದಲ್ಲಿ
ಸಡಗರದಿ ಸಹ್ಯಾದ್ರಿ ಬೊಮ್ಮಗಿರಿ ಪೆಸರಾಂತು
ಪೊಡವಿಯೊಳ್ ಕೀರ್ತಿಯಿಂ ಪೊಳೆಯಲ್ಕೆ ನಿಜನಾಮ
ಪಡೆಯುತೀ ಜಲನಿಕರ ಬೊಮ್ಮ ಕುಂಡಿಗೆಯೆಂದು ತೊಳಗಿ ಮಂಗಳವಾಗಲಿ||

ಆಲಿಸಾದೊಡಗಸ್ತ್ಯ ಮೇದಿನಿಯಲೀಕ್ಷೇತ್ರ
ಪಾಲೆರೆವ ಸುರ ಧೇನುವೊಲ್ ವರಜಲದಿ ತುಂಬಿ
ಮೇಲಿನಿಂ ಮಜ್ಜನವ ಗೈದವರ ಹರಿಯುಸಾಯುಜ್ಯಮನ್ನಿತ್ತು ನಲಿದು |
ಜಾಲಮನ್ನೊರಸುತ್ತ ಪಾಪನಾಶಿನಿಯೆನಿಸಿ
ಪಾಲಿಸುತ ಮುಳುಗಿದರ ಪಾನಮಂ ಮಾಡಿದರಿ
ಗಾಲೋಲ ಮಾಗಿರುವ ವೈಕುಂಠ ವಾಸಮಂ ತೋರಲೀ ಸತ್ಯತೀರ್ಥ ||

ಧನ್ಯನಾದೆನು ತಾತ ಪೂಜಿಸುವೆ ನಾಹರಿಯು
ಮುನ್ನವಿಾ ತೀರ್ಥದಿಂದಭಿಷೇಚನವ ಗೈದು
ಸನ್ನುತಾಂಗನ ಮಹಿಮೆಯಿಂದಲೀ ಭೂಭಾಗ ಪರಮ ಪಾವನವಾಗಲಿ |
ಇನ್ನಿರುವೆ ನೀ ಗಿರಿಯೊಳುತ್ತಮಾಂಗನ ಗಾನ
ಮನ್ನೊರೆದು ತಪಗೈದು ಕಳೆವೆನಾ ಕಾಲಮಂ
ರನ್ನಮಯವೆಟ್ಟದೊಳ್ ಮಲೆನಾಡ ಕೊಡಗಿನೊಳ್ ಪದೆದು
ಸಂತೋಷದಿಂದೆ ||

ಇಂತೊರೆಯೆ, ಮಾಯವಾಗಲ್ ಬ್ರಹ್ಮ ಕಲಶಜಂ
ಕಂತು ಜನಕನ ಪೂಜೆಯಂ ಗೈದು ಜಾನಿಸುತ
ಲಂತರಾತ್ಮನ ತಪದಿ ಸಹ್ಯಾದ್ರಿಯೊಳ್ನಿಂದು ಕಾಲನೂಕುತಲಿದ್ದನು |
ಪಿಂತೆ ಸುಧೆಯಂ ಪಡೆಯೆ ದೇವದಾನವರೆಲ್ಲ
ರಂತರಂಗದಿ ಕೂಡಿ ಪಾಲ್ಗಡಲ ಮಥಿಸಿದರು
ಬಂತು ಸುರತರು, ಚಂದ್ರನಿನ್ನಿತರ ವಸ್ತುಚಯ ಪಾಲ್ಗಡಲ ಬಸುರಿನಿಂದ||

ಶ್ರೀಲಕ್ಷ್ಮಿಯುದಿಸಿದಳ್ ಪಾಲ್ಗಡಲ ಬಸುರಿನೊಳ
ಗಾಲೋಲ ಮಾಗಿರುವ ಸೌಂದರ್ಯಮಂಕಂಡು
ಶ್ರೀಲೋಲ ಕೈಪಿಡಿದ ಮಾರಮಣನೆನಿಸುತ್ತ ವೈಕುಂಠದೊಳ್ ಮೋದದಿ |

ಮೇಲಾದ ಸುಧೆಯನ್ನು ಪೊಂದಿದರ್ ಉಭಯರೊಳ್
ಕಾಳಾಯ್ತು ಪಡೆಯಲ್ಕೆ ದೇವದಾನವರೆಲ್ಲ
ಕಾಳಗವ ಹೂಡಿದರ್ಮುಳಿಯುತ್ತ ತುಳಿಯುತ್ತ ರೋಷದಿಂ ಬೈದುತಿವಿದು||

ಆ ಸಮಯದೊಳು ಹರಿಯು ಸೌಂದರ್ಯ ಮೋಹಿನೀ
ವೇಷವಂ ತಾಳಿದಂ ನವ ಯೌವನಾಂಗನೆಯ
ಭಾಸದಿಂ ಸಾಸದಿಂ ನಡೆದು ಸುರದಾನವರ ಕಲಹಮಂ ಶೋಧಿಸಲ್ಕೆ |
ಮೋಸಹೋದರು ನೋಡುತಾ ರೂಪರಾಶಿಯಂ
ಘಾಸಿಯಾದರು ಕಂಡು ಬಲು ಮೋಹ ಜಾಲದಿಂ
ಭಾಸುರಾಂಗನೆಯನ್ನು ಬಾಚು ತಾಲಿಂಗಿಸಲ್ ಬೆಂದು ಸುಮಬಾಣಹತಿಗೆ||

ತನು ಬಳುಕೆ ಲತೆಯಂತೆ ಮುಖಪೂರ್ಣ ಶಶಿಯಂತೆ
ವನಜಾಕ್ಷಿ ಸಿರಿಲಕ್ಷ್ಮಿ ಕಾಂತಿಯಿಂ ಶಾಂತಿಯಿಂ
ಮುನಿ ಮನೋಹಾರಿಣಿಯು ಚಂಚಲಾಕ್ಷಿಯನೋಡಿ ಮೋಹಪರವಶರಾಗುತ
ಕಣ ಕಣನೆ ಮಿಂಚುತಿಹ ಹಾರವಲಯಂ ಮಿರುಗೆ
ಝಣ ಝಣತ್ಕಾರದಿಂ ಕಿಂಕಿಣಿಯುರವದಿಂದ
ಮಣಿ ಮಕುಟದಿಂ ಶೋಭಿಸುವ ರಮಣಿ ರೂಪದಿಂ ಮುಗ್ಧರಾದರು ಮೋಹದಿ ||

ಒಳಗಾಗಿ ಬರ್ದಿಲರು ದಾನವಾದಿಗಳೆಲ್ಲ
ತೊಳಗಿ ಬೆಳಗುವ ತರುಣಿ ಚೆಲ್ವಿಕೆಗೆ ಸೋಲುತ್ತ
ಹೊಳೆವ ಸುಧೆಯಂ ಮರೆತು ಕಾಮಿಸುವ ಮನದಿಂದ ಕರೆದರಾವರವನಿತೆಯ |
ಬಲು ಮೋಹಮಂ ಬೀರಿ ಸುಧೆಯ ಗಿಂಡಿಯ ಪಿಡಿದು
ಸಲಿಸಿದಳು ಸುರಗಣಕೆ ದನುಜರಿಗೆ ಸುರೆಯಿತ್ತು
ಒಲಿದಂತೆ ತೋರುತ್ತ ಹರಿಣಾಕ್ಷಿಯೋಡಿದಳು ಸುಧೆಯ ಸುರರಿಗೆ ಹಂಚುತ||

ಇಂತು ಕಲಹವ ನಿಲಿಸಿ ಮಾಯವಾದಳು ನಾರಿ
ಸಂತುಷ್ಟಿಯಂ ಪಡೆದು ಸುರರೆಲ್ಲ ತೋಷಿಸಲು
ಹಂತಿಗೊಟ್ಟಿಹಳೆಂದು ದಾನವರು ಹುಡುಕಿದರು ರೋಷದಿಂ ಘೋಷಿಸುತ್ತ|
ಚಿಂತೆಯಿಂ ಕಳವಳಿಸಿ ಘರ್ಜಿಸುತ ಕೋಪದಿಂ
ದಂತರಂಗದಿ ಮರುಗಿ ಮರುಳು ಮಾತಿಗೆ ಸೋತೆ
ವೆಂತೆಂದು ಹಲುಬುತ್ತ ಸುರಶತ್ರುಗಣವೆಲ್ಲ ತೊರೆದರಾಶೆಯ ಸುಧೆಯಲಿ ||

ಹರಿಯು ಮೋಹಿನಿಯಾಗೆ ಚಿಂತೆಯಿಂ ಸಿರಿದೇವಿ
ನರಲೋಕದೊಳ್ ಸುಧೆಯು ಜೀವನವನೀಯಲ್ಕೆ
ಭರದಿ ಲೋಪಾಮುದ್ರೆಯವತಾರವಂ ತಳೆಯುತಜ ಕುವರಿಯಾದಳಂದು |
ಹರಸಿದನು ಮಾನಸಿಕ ಪುತ್ರಿಯಂ ಕಮಲಭವ
ಕರೆದೊಯ್ದು ನಿಜಲೋಕದೊಳ್ಪ್ರೀತಿಯಿಂ ಪೊರೆದು
ತಿರೆಯಲ್ಲಿ ನದಿಯಾಗಿ ವಾಹಿನಿಯರೂಪವಂ ಪೊಂದಲ್ಕೆ ಕರುಣಿಸಿದನು ||

ಲಕುಮಿಯಂ ಭಕ್ತಿಯಿಂ ತುತಿಗೈದು ಮೇಲಾದ
ಸುಕುಮಾರಿಯಂ ಪಡೆದ ಬೊಮ್ಮನಂ ಕಾಣುತ್ತ
ಸಕಲ ಲೋಕವ ಮುಂದೆ ಪಾವನವ ಗೈವಳೀ ಕುವರಿಲೋಪಾಮುದ್ರೆಯ
ಶಕುತಿಯಂಶದಿ ಬಂದು ಜಗದೊಳಿಹ ಜನಗಳಿಗೆ
ಮುಕುತಿಯಂ ಪಾಲಿಸುವ ವಾಹಿನೀ ರೂಪದಿಂ
ಸುಖನಿಧಿಯ ಕರುಣಿಪಳು ಕಾವೇರಿ ನಾಮದಿಂದೆಂದನಾ ಶ್ರೀರಮಣನು ||

ಪಿಂತೆ ಕಳೆಯಲು ಕಾಲ ಸುರಗಣವು ಕಮಲಜನ
ನಂತರಂಗದಿ ಕಂಡು “ ಭೂಲೋಕದೊಳಗೊರ್ವ
ಸಂತ ಶಾಂತಿಯ ಪಿಡಿದು ಕಟ್ಟುಗ್ರ ತಪಗೈಯೆ ಬೇಯುತಿದೆ ಸುರಲೋಕವು|

ಸಂತರಂ ಬಳಲಿಪುದು ತರವಲ್ಲ ವರಗಳಂ
ಸಂತಸದಿ ಸಲಿಸುವುದು ತಾತ ನಿನಗೌಚಿತ್ಯ
ಮಿಂತೆಂದು ಬೋಳೆಯರು ಪೇಳಿದರು ಕೈಮುಗಿದು ಪದ್ಮಾಸನಂಗೆ ಭರದಿ||

ಸುರಲೋಕಮಂ ಬೇಡಿ ತಪಗೈವನಿವನೇನೊ
ಸುರಪತಿಯ ಪದವಿಯಂ ಪಡೆಯಲ್ಕೆ ಮಹಿಮೆಯಂ
ಸುರ ಸುಖದ ಸೂರೆಯಂ ಮಾಡಿ ತೊಳಗುವನೇನೊ ತಿಳಿಯಲಾರೆವು ತಾತನೆ|
ಮರೆಯದೀಗಲೆ ಪೋಗು ತಾ ಮುನಿಯನೆಳ್ಚರಿಸಿ
ವರವನೀವುದು ಬೇಗ ದಹಿಸುತಿದೆ ತಾಪಾಗ್ನಿ
ಕರುಣಿಪುದು ಶೀಘ್ರದಿಂ ಲೋಕಮಂ ಸಲಹುವುದು ಅಜ ನೀನು
ಪೋಗು ಬೇಗ ||

ಭಯ ಬಿಡಿರಿ ಬೋಳೆಯರಿ ಧರೆಯೊಳು ಕವೇರಮುನಿ
ನಯದಿಂದ ಭಕ್ತಿಯಿಂ ಕಡುತಪವ ಗೈಯುುವಂ
ಬಯಸುವಂ ತನಯರಂ ಸುರಲೋಕ ಪದವಿಯಂ ಬೇಡನಾ ಮೌನಿವರ್ಯ|
ನಿಯತ ಕರ್ಮಂಗಳಂ ನಿಯಮದಿಂ ಮಾಡುತ್ತ
ಹಯವದನನನ್ನೊಲಿಸಿ ಮೋಕ್ಷ ಪದವಿಯ ಬಯಸಿ
ಜಯವ ಪೊಂದುವನಿಂದು ಪೋದೆನಾದೊಡೆ ನಾನು ಪುತ್ರಿಯಂ
ಕರುಣಿಸುವೆನು ||

ಮಾಧವನ ಸುತ ನಡೆದ ಮೌನಿಯನ್ನರಸುತ್ತ
ಮೋದದಿಂ ತಡವಿದನು ಕರಗಳಿಂ ಬಾಚುತ್ತ
ಸಾಧುವಂ ತಕ್ಕೈಸುತೆಳ್ಚರಿಸಿ ಬೆಸಸಿದಂ ವರಗಳಂ ಕೇಳೆನುತ್ತ |
ಆದರದಿ ಬಂದಿರುವ ವನಜಪೀಠಗೆ ನಮಿಸಿ
ಸಾಧಿಸಿದ ಸಾಧನವು ಕೈ ಸೇರಿತೆನ್ನುತ್ತ
ಸಾದರಾನಂದಮಂ ಪಡೆದು ಪುಳಕಿತನಾಗಿ ಕಣ್ದೆರೆಯೆ ನೋಡಿ ನಲಿದು ||

ಪಾರಮಾರ್ಥಿಕ ಮತಿಯನೀಯುತ್ತ ಪೊರೆಯುವುದು
ಮಾರ ಜನಕನ ದಿವ್ಯ ಸಾಯುಜ್ಯಮಂ ಪಡೆಯೆ
ಪಾರ ಸಾಧನ ಮಾರ್ಗಮಂ ತೋರಿ ಕಾಯುವುದು ಬೇರೇನು ಬೇಡೆನಲ್ಕೆ |
ಸಾರವಸ್ತುವ ಬಯಸಿ ಮೋಕ್ಷಮಂ ನೀ ಪಡೆವೆ
ಧಾರುಣಿಯ ಕಾರ್ಯಮಂ ಮುಗಿಸಿ ಪೋಗುವೆ ಮುಂದೆ
ಬೇರೆಯಾಗಿದೆ ನಿನ್ನ ತಪದ ಕಾರಣ ಮುನಿಪ ಬೇರೊಂದು ವರವ ಬೇಡು ||

ಪುನ್ನಾಮ ನರಕದಿಂ ತಪ್ಪಿಸುತ ಪರಮಾತ್ಮ
ಸನ್ನಿವಾಸವ ತೋರ್ಪ ಸತ್ಪುತ್ರನಂ ನೀಡು
ಸನ್ನುತಾಂಗನೆ ನಮಿಪೆ ತಂದೆಯೆಂದೆ ನಿಸೆನ್ನನುರ್ವಿಯೊಳು ಮಗುವನಿತ್ತು |
ಇನ್ನಾವ ವರಗಳಂ ಬಯಸಲಾರೆನು ನಾನು
ರನ್ನ ಕುವರನ ಪೊಂದಿ ಸಂತಾನ ಸೌಖ್ಯದಿಂ
ದುನ್ನತದ ತೋಷದಿಂ ದಾಟುವೆನು ಭವ ಜಲಧಿ ಎಂದನಾಮುನಿಪನಾಗ ||

ಕೇಳಿ ಸಂತೋಷದಿಂದೀ ಜನ್ಮದೊಳು ನಿನಗೆ
ಮೇಲಾದ ಪುತ್ರರಂ ಪಡೆವ ಯೋಗವೆ ಇಲ್ಲ
ಬಾಲೆ ಲೋಪಾಮುದ್ರೆಯಂ ಕುಡುವೆ ಸುತೆಯಾಗಿ ಮೋದದಿಂ ಸ್ವೀಕರಿಪುದು |
ಈ ಲಲನೆಯಿಂ ಧರೆಗೆ ತವ ಕುಲಕೆ ಗುಣಮಧಿಕ
ಬಾಳುವಳು ನದಿಯಾಗಿ ಕೀರ್ತಿಯಂ ಪಡೆಯುತ್ತ
ಪಾಲಿಪಳು ಜಗವನ್ನು ಪಡೆದಿವಳ ಧನ್ಯನಾಗೆನಲಾಗ ಪದುಳದಿಂದ ||

ಧನ್ಯನಾದೆನು ನಾನು ಕುವರಿಯಂ ಪೊಂದುತಲಿ
ಸನ್ನುತಳ ಪೊರೆಯುವೆನು ಮುದದಿಂದಲೀ ಜಗದಿ
ಗಣ್ಯನಾದೆನು ಪಿತನ ಯೋಗಮಂ ಪಡೆಯುತಲಿ ತೋಷದಿಂ ಮನದಣಿಯಲು |

ಮನ್ನಣೆಯ ಬೇಡುವೆನು ಸುರವಂದ್ಯ ನಾಲ್ಮೊಗನೆ
ಪನ್ನಗಾಸನ ತನಯ ಸಿರಿವಿರಿಂಚಿಪ್ರಮುಖ
ಪುನ್ನಾಮ ನರಕದಿಂ ತಪ್ಪಿಸಿದೆ-ತವಪಾದಪದ್ಮಗಳ ನೆನೆಯುತ್ತಿರೆ ||

ಶಿವ ಶಿವಾ ಪೆರ್ಚೇನು ಮಾಮ್ಮೈಮೆಯಿಂದಲೀ
ಕುವರಿಯಂ ಪಡೆಯುತಲಿ ತೊಳೆಯುವೆನು ಜನ್ಮಮಂ
ತವಪಾದ ಸೇವೆಯಿಂ ಧನ್ಯನಾದೆನು ಮುಂದೆ ಕುಸುಮಜನೆ ಶರಣುಶರಣು|
ಅವನಿಯೊಳು ಕೀರ್ತಿಯಂ ಪೊಂದುತಲಿ ಬೆಳಗಲೀ
ನವವನಿತೆ ಮೂಲೋಕಕುಪಕಾರವೆಸಗುತಲಿ
ಸವಿನಯದೊಳೆರಗುವೆನು ಸಾರ್ಥಕವ ಪಡೆದುದೀ ನರಜನ್ಮಧಾರುಣಿಯಲಿ||

ಕೇಳಾದೊಡಿನ್ನು ಧರಣಿಯೊಳಗೀವನಿತೆ ಶಿವ
ಲೋಲೆಯಾಗುತಲಿ ನರಜನ್ಮಮಂ ಕಳೆದುಳಿದ
ಕಾಲೆರಡರಂಶದಿಂ ನದಿಯಾಗಿ ಸಿರಿಪತಿಯ ಕೂಡುವಳು ನಾರೀಮಣಿ |
ಮೇಲೆನಿಪಳೀ ಜಗದಿ ಸುರನರೋರಗರೊಳಗೆ
ಬಾಲೆಯಂ ಪ್ರೀತಿಯಿಂ ಪಾಲಿಸೈ ಮುನಿಪತಿಯೆ
ಲೀಲೆಯಿಂ ಮುಕ್ತಿಯಂ ಕೊಡುವಳೀ ವರವನಿತೆ ಸೇವಿಸಲು ಪದುಳದಿಂದ ||

ಆ ಕವೇರನು ಮುದದಿ ಕರವೆರಡ ನೀಡುತ್ತ
ಸ್ವೀಕರಿಸುತಾನಂದದಶ್ರುಗಳ ಸುರಿಸುತ್ತ
ನಾಕವನಿತೆಯನಂದು ಕಮಲ ಪೀಠನ ತುತಿಸಿ ಪಿತನೆನಿಸಿ ಲೋಕದಲ್ಲಿ |
ಆ ಕಾಮಿನೀ ಮಣಿಯು ಅಜಗೆರಗಿ ನುಡಿಸಿದಳ್
ಲೋಕದೊಳಗೆಳೆತಂದು ನನಗೇತಕೀ ತೆರದ
ಶೋಕಮಂ ನೀನಿತ್ತೆ ನಾ ಮಾಡಿದಪರಾಧವೇನುಂಟು ಪೇಳು ತಂದೆ ||

ನಾ ಗೈವ ಕಾರ್ಯಮಂ ಬೆಸಸುವುದು ಧರೆಯೊಳಗೆ
ಈಗಲೀ ತಿರೆಗೆನ್ನ ಕಳುಹಲೇನವಸರಂ
ಬೇಗಲರುಹುತ ಮನದ ಶಂಕೆಯಂ ಕಳೆದು ನೀ ಸಲಹುವುದು ಕರುಣದಿಂದ|
ಹೋಗುಲೋಪಾಮುದ್ರೆ ಶೋಕಿಸದೆ ಬುವಿಯೊಳಗೆ
ನೀಗೈಯಲುಂ ಜಗದಿ ಬಹಳ ಕಾರ್ಯಗಳುಂಟು
ಜಾಗುಮಾಡದೆ ಜನರ ಹಿತವೆಸಗು ಮುದದಿಂದ ಮೇದಿನಿಯಮೇಲಿರುತಲಿ ||

ಆದರದಿ ಬಯಸುತ್ತ ಹಿತವನ್ನು ಜನಗಳಿಗೆ
ಮೋದಮಂ ನೀಡುತ್ತ ಸೌಭಾಗ್ಯ ಸಂಪದವ
ಸಾಧಿಸಲು ಸಹಕಾರಿಯಾಗಿ ನೀಂ ಮೇದಿನಿಯ ಫಲಪುಷ್ಪಭರಿತಮಾಗಿ |
ಶೋಧಿಸುತ್ತಲಿ ಶಿವನ ವರಿಸಿ ನೀಂ ಸ್ತ್ರೀ ರೂಪ
ಸಾಧನದಿ ಸತಿಯಾಗಿ ನರಲೋಕವಾಸಮಂ
ಭೇದಿಪುದು ಪಾಪಾತ್ಮ ಸಂಜಾತರಂ ತುಳಿದು ದುರಿತಮಂ ಪರಿಹರಿಸುತ ||

ಕರುಣಿಸಾದೊಡೆ ತಂದೆ ನದಿಯಾಗಿ ಸಾಗರನ
ವರಿಸಲ್ಕೆ ಧರೆಯಲ್ಲಿ ಸೇವಿಸುವೆ ಸರ್ವರಂ
ಪರಿಹರಿಸಿ ಕಷ್ಟಗಳ ಭಾಗ್ಯ ಸಂಪದವಿತ್ತು ವಾರಿವಾಹಿನಿ ರೂಪದಿ |
ಪೊರೆವುದೈ ನೀಡುತ್ತಲೀಯೊಸೆಯಂ ತಾತ
ಸಿರಿಪತಿಯ ಚರಣಾರವಿಂದಮಂ ಕಾಣಲ್ಕೆ
ವರಗಳಂ ಕರುಣಿಪುದು ಮಣಿವೆನೆಂದೆರಗಲ್ಕೆ ನಾಲ್ವದನನಿಂತೆಂದನು ||

ತಾಯೆ ಬೇಡೌ ದುಗುಡ ನೀಗು ಸಂದೆಗವನ್ನು
ಮಾಯುಮಾದೀ ಜಗದಿ ಮಾಯಮಂ ತೊಡೆಯುತ್ತ
ತೋಯರೂಪದಿ ನೀನು ನದಿಯಾಗಿ ಪಸರಿಸುವೆ ಕಾವೇರಿನದಿಯೆನಿಸುತ |

ತೋಯ ಜಾಕ್ಷಿಯೆ ನೀನು ಅರ್ಧಾಂಶದಿಂ ಹರಿಯ
ಕೈಯ ಪಿಡಿಯುತ ಪೊರೆವೆ ಸಹ್ಯಾದ್ರಿಯೊಳ್ ಜನಿಸು
ತಾಯತಾಂಬಕಿ ಜಸವ ಪಡೆಯುತ್ತ ಮರ್ತ್ಯರಂ ಸಗ್ಗಕೇರಿಸು ಪದುಳದಿ ||

ತರಳೆ ನೀಂ ಹರಿಹರರ ವಾರಿನರ ರೂಪದಿಂ
ಕರವಿಡಿದು ವರಿಸು ಕಾವೇಗಿ ಲೋಪಾಮುದ್ರೆ
ಯುರುತರದ ಕೀರ್ತಿಯೆಂ ಪಡೆಯುತ್ತಲೋಗರಂ ಸೌಖ್ಯದಿಂ ಸಲಹುತ್ತಲಿ |
ಹರಿ ಕುವರಿ ಗಂಗೆ ತಾಂ ದುರಿತಮಂ ನೀಗಲ್ಕೆ
ಬರುತ ಮಜ್ಜನ ಗೈದು ಪರಿಶುದ್ಧಿಯಾಗುವಳು
ಪರಮ ಪಾವನೆ ನೀನು ನರಲೋಕದೊಳ್ ಸಕಲ ನರಮೃಗಂಗಳ
ಪೊರೆಯುತ ||

ಎನಗೆ ಸುತೆಯಾದೊಡಂ ನಮ್ಮಯ್ಯನಂ ವರಿಸಿ
ಜನನಿಯೆನಿಸುವೆ ನನಗೆ ವಿಮಲೆ ಗಂಗಾದೇವಿ
ಘನತರದ ಕೀರ್ತಿಯಿಂ ಶಿವ ಶಿರದಿ ನೆಲಸಿರಲ್ ನೀನವಳ ಮಿಾರಿಸಿರುವೆ |
ವಿನುತೆ ಗಂಗೆಯು ಪಡೆದ ಕಲ್ಮಷವ ನೀ ತೊಳೆವೆ
ವನವಾಹಿನೀ ಯೆನಿಸಿ ಕಲಿದೋಷಗಳ ಸುಡುವೆ
ಅನುನಯದಿ, ಜಾಹ್ನವಿಯು ಮರ್ತ್ಯರಘವಂ ಕಳೆಯುತುಳಿಸಿಕೊಂಬಳು
ದೋಷವ||

ಕಳೆಯಲಾರಳು ಬಂದ ಪಾಪರಾಶಿಯ ತಾನು
ಉಳಿಯಲಾರದು ನಿನಗೆ ತೊಳೆದು ಪೋಪುದು ದೋಷ
ಕಳೆವೆ ನೀ ರೋಗಾದಿ ಬಾಧೆಗಳ ಪರಮಪಾವನೆಯೆನಿಸಿ ಲೋಕದಲ್ಲಿ |
ಕಳೆದು ಶಂಕೆಯನೆಲ್ಲ ಬೊಮ್ಮ ಕಳುಹುತ ಸುತೆಯ
ನೊಲವಿಂದ ಸಿರಿರಾಮವಿಠ್ಠಲನ ಬಸಿರಸುತ
ನೆಲತೊರೆದು ನಿಜವಾಸಮಂ ಕುರಿತು ತೆರಳಿದಂ ಸಂತೈಸಿ ಕಾವೇರಿಯಂ ||

# ೪. ಕಾವೇರಿಯ ವಿವಾಹ.



**ವ**ನಜಪೀಠನು ತನ್ನ ಕುವರಿಯಂ ತಕ್ಕೈಸು
ತನಘೆ ಬಿಡು ಬಿಡು ಚಿಂತೆ ಮುಂದೆ ನೀ ಕುಂಭಜನ
ವನಿತೆಯಾಗಲ್ಕವನು ವಾರಿರೂಪದಿ ನಿನ್ನ ನಿಜಕಮಂಡಲೊಳಗಿರಿಸೆ |
ಘನತರದಲಕ್ಷಯದ ಜಲಕೊಡದೊಳಿರುತಿರಲು
ಕನಕಾದಿ ನದಿಯೆಡೆಗೆ ಪೋದಾಗ ನೀನಿಳಿದು
ವನಧಿಯಂ ಗಮಿಸುವುದು ತೋಷದಿಂ ವನಜಾಕ್ಷಿ ವನಭರಿತಳಾಗುತ್ತಲಿ ||

ಪಿಂತೆ ಕೊಟ್ಟನು ಹರಿಯು ಅಕ್ಷಯದ ಜಲಪಾತ್ರ
ವಂ ತಂದು ನನಗಾಗಿ ತತ್ಪಾತ್ರಮನ್ನಿತ್ತೆ
ನಂತರಂ ಶಿವರೂಪಿ ಕಲಶಜಗೆ ಕೇಳಲ್ಕೆ ನಾನೊಲಿದು, ಮುಂದೆ ನಿನ್ನ |
ಕಂತುಪಿತಜಾನದಿಂ ಸಂಚಾರಮಾಡುತ್ತ
ನಂತರಂ ಬಳುಕುತಿಹ ನಿನ್ನಾಯಸವ ಕಂಡು
ಚಿಂತಿಸುತ ಜಲರೂಪದಿಂ ನಿನ್ನ ಕೊಡದೊಳಿಡೆ ಪರಿವೆ ನೀಂ ನದಿಯಾಗುತ||

ಪರಿದು ಪೋದೊಡೆ ನಿನ್ನ ಸಾಮೀಪ್ಯದಲ್ಲಿರುವೆ
ಹರಿಹರರ್ವೆರಸಿನಾಂ ಕುಂಭಜಂ ಭರದಿಂದ
ಹರಲಿಂಗಮಂ ಬಿತ್ತಿ ಪಾವನೆಯ ಗೈಯುವಂ ಶಿವವಾಸಮಾಗಿರಲ್ಕೆ |
ವರ ಕಪಿಲ ರೂಪಿನಿಂದಿರುವ ಹರಿಯಂ ಕೂಡಿ
ತರಳೆ ಹರಿಸತಿಯಾಗಿ ಕಪಿಲೆಯೆನಿಸುವೆ ನೀನು
ಬರುತ ಭಾಗೀರಥಿಯು ಸೇರುವಳು ಪನ್ನೆರಡು ವತ್ಸರಕ್ಕೊಂದುವೇಳೆ ||

ಕಾವೇರಿ ನಾಮದಿಂ ಸಾರ್ದು ಸಾಗರವನ್ನು
ಕಾವೇರಿ ಸಿರಿಲಕ್ಷ್ಮಿ, ಕಪಿಲೆ ಮೊದಲಾದಖಿಳ
ಪಾವಿತ್ರ್ಯನಾಮದಿಂ ಕೀರ್ತಿಯಂ ಪಡೆಯುತ್ತ ಪೊಳೆವೆನಿನ್ನಿಚ್ಛೆಯಂತೆ |
ಭಾವಿಸಲ್ ನೀನಿರುವ ಭೂಭಾಗ ಜಲಭಾಗ
ಪಾವನತ್ವವ ಪೊಂದಿ ಪುಣ್ಯದಾಯಕವಾಗು
ತೀವಲಯದೊಳ್ಪರಮ ಮೋಕ್ಷಸಾಮ್ರಾಜ್ಯಮಂ ರಚಿಸುವುದು ಕೇಳೆಬಾಲೆ||

ಹರಿಯು ಕೂಡುವ ನಿನ್ನ ಶಿವಲಿಂಗ ದೇಶದೊಳ್
ಹರಿಹರರ್ವೆರಸಿನಾಂ ನಿನ್ನ ಸನ್ನಿಧಿಯಲ್ಲಿ
ಅರಿಯದೊಲು ನೆಲಸಿರುವೆನಾವಗಂ ನೀನಿನ್ನು ಶಂಕಿಸದೆ ತೆರಳು ತರಳೆ |
ತೊರೆದು ಸಂಶಯಗಳನು ಮುಂದಿನವಸರವನ್ನು
ಅರಿಯಲ್ಕವೇರ ಮುನಿಯಾಶ್ರಮದಿ ಬೆಳೆಯುತಿರೆ
ಹರಿದೈದಿ ಪೊಂದಿನೀ ಪುಣ್ಯವಾಹಿನಿರೂಪು-ಹೋಗೆಂದ ಕಮಲಾಸನ ||

ಇಂತೊರೆದು ನೀರೇಜಕುಸುಮಾಸನಂ ನಡೆಯೆ
ಚಿಂತೆಯಂ ತೊರೆಯುತ್ತ ಬಳೆದಳಾ ಸುಂದರಿಯು
ಕಂತು ಜನಕನ ನೆನೆಯುತ ಕವೇರ ಮುನಿಪತಿಯ
ಸುಕುಮಾರಿಯೆನಿಸಿಕೊಂಡು |
ಸಂತರಂ ಪೂಜಿಸುತ ತಂದೆ ತಾಯ್ಗಳ ತಾನು
ಸಂತೋಷದಿಂ ಸೇವಿಸುತ ತರಳೆಯೊಲವಿನಿಂ
ಕಂತು ಸೋದರ ಪೇಳ್ದ ಅವಧಿಯಂ ಕಾಯುತ್ತ ಲೋಕೋಪಕೃತಿಯ
ನೆನೆದು ||

ಪ್ರೇಮದಿಂ ತಾಯ್ತಂದೆ ಈರ್ವರುಂ ಕಾವೇರಿ
ಭಾಮೆಯಂ ಮುದ್ದಿಸುತ ಸಾಕಿದರ್ ಪುತ್ರಿಯಂ
ಕಾಮಿಸುತ ಬೇಕಾದುದಂ ನೀಡಿ ಸೌಭಾಗ್ಯ ಸಾಧನವನೊದವಿಸುತ್ತ |

ಕಾಮಿನಿಯ ಕಾಮನೆಯ ಪೂರ್ತಿಗೊಳಿಸಲು ಮುನ್ನ
ಆ ಮುನಿ ಸತಿಯು ಸೆರವಿ ಪರಮ ಸಂತಸವಿತ್ತು
ಸೋಮವದನೆಯನವರು ಸಲಹುತ್ತಿದ್ದರು ಬಹಳ ವಾತ್ಸಲ್ಯದಿ. ಪದುಳದಿ ||

ತರಳೆ ತಾಯ್ತಂದೆಯರನರ್ತಿಯಿಂ ಸೇವಿಸುತ
ಪರಮಾತ್ಮ ರೂಪರವರೆಂದರಿತು ಪೂಜಿಸುತ
ಭರದಿಂದ ಮತಿವಂತೆ ಭಕ್ತಿಯಿಂದಾದರಿಸುತೆಡಬಿಡದೆ ಸದ್ಬುದ್ಧಿಯಿಂ |
ಹರಿಸುತನು ಪೇಳ್ದವಧಿಯಂ ಕಾಯ್ದು ನೋಡುತಿರೆ
ಹರನಂಶ ಸಂಭೂತ ಕುಂಭಸಂಭವನನ್ನು
ವರಿಸಲ್ಕೆ ತಪವೆಸಗೆ ಪಿತನಡಿಯ ಸಾರುತ್ತಲಾಣತಿಯ ಕೇಳ್ದಳಾಗ ||

ತಾತ ಕೇಳ್ಳೈಪಿಂತೆ ಆಣತಿಯನಿತ್ತಿಹನು
ತಾತ ತಪವೆಸಗಲ್ಕೆ ಪಶುಪತಿಯ ನುತಿಸಲ್ಕೆ
ಪ್ರೀತಿಯಿಂ ಕಳುಹೆನ್ನ ಬಿನ್ನಪವ ಮನ್ನಿಸುತ ವನಕೆನ್ನ ತಪವೆಸಗಲು |
ಜಾತಳಾದೆನು ಜಗದಿ ಜನಹಿತದ ಕಜ್ಜದೊಳ
ಗೀತನುವ ಸವೆಸಲ್ಕೆ ಸನ್ಮಾರ್ಗಮಂ ಪಡೆದು
ಪೂತಳಾಗಲ್ಕೆನಗನುಜ್ಞೆಯಂ ಪಾಲಿಪುದು ತವಚರಣಕಾಂ ನಮಿಪೆನು ||

ಮೂಲೋಕದೊಳ್ ಬೆಳಗಿ ಪೊಳೆವಂಥ ಕೀರ್ತಿಯಂ
ಮೇಲೆನಿಪ ಪದವಿಯಂ ಕೊಟ್ಟುಮಾನವ ಗಣಕೆ
ಪಾಲಿಸಲು ಶಕ್ತಿಯಂ ತಪದಿಂದ ಪಡೆಯಲ್ಕೆ ಪೋಗಲ್ಕೆ ಸಿದ್ಧಳಿಹೆನು |
ಬಾಳುವೆನು ಸೇವೆಯಿಂ ಜನಪದವ ಕಾಣುವೆನು
ಶೀಲವಂತರ ಸಗ್ಗಕೇರಿಸುವ ಪದವಿಯಂ
ಕೀಳುಗೈದವರನ್ನು ಪಾಪಹರಿಸುತ ಪುಣ್ಯಲೋಕಮಂ ಸಾರುವಂತೆ ||

ಆಣತಿಯ ಬೇಡುವೆನು ಪೊರಮಡಲು ತಪವೆಸಗೆ
ಕಾಣಲ್ಕೆ ಹರನಡಿಯ ಕುಲಮೂರರುನ್ನತಿಯ
ಕ್ಷೋಣಿಯೊಳ್ ಬಯಸುವೆನು ನೋಡುವೆನು ಮುಕ್ಕಣ್ಣಶಿವನನ್ನು
ಮೆಚ್ಚಿಸುತ್ತ ।
ನೀನೊಲಿದು ಕಳುಹೆನ್ನ ಶಿರಬಾಗಿ ನಮಿಸುವೆನು
ಮೇಣೆನ್ನ ಮುದದಿಂದ ಪರಸಿ ಕಳುಹಿಸುತೆನ್ನು
ತೇಣಾಕ್ಷಿ ಜನಕನಂ ಕೇಳಲ್ಕವೇರ ಮುನಿ ನಿಜಕುವರಿಗಿಂತೆಂದನು ||

ಅಜನಾಜ್ಞೆಯಿಂ ತರಳೆ ತಪವೆಸಗೆ ಶಿವನಡಿಯ
ಭಜಿಸುತ್ತ ಜನಹಿತವ ಮೋಹಿಸುತ ಪೊರಮಟ್ಟು
ಸುಜನರಂ ಸೇವಿಸುತ ಹರನಡಿಯ ಭಾವಿಸುತ ಶಿವರೂಪಮಂ ಕಾಣುತ ।
ಅಜಗಿರಿಯ ತಪ್ಪಲೊಳ್ ಸಪ್ತಋಷಿ ಸಂಗದೊಳ್
ನಿಜಕುವರಿ ತಪಗೈದು ವರಗಳಂ ಪಡೆಯುತಲಿ
ಭುಜಗ ಭೂಷಣಕರವ ನೀ ಪಿಡಿದು ಸುಖಿಸೆಂದು ಪರಸಿದನು ಪದುಳದಿಂದ||

ಛಳಿಗಾಳಿ ಮಳೆ ಬಿಸಿಲು ಬಾಧಿಸದೆ ನಿನ್ನನ್ನು
ಖಳಮೃಗಾದಿ ಕ್ರೂರ ವಿಷಜಂತುಗಳು ನಿನ್ನ
ಬಳುಕುವೀ ಸೌಂದರ್ಯದೇಹಮಂ ಕಾಯ್ದಿಡಲಿ ಪರಶಿವನು ಮೈದೋರಲಿ|
ಇಳೆಯೊಳಗೆ ಪುಣ್ಯತರ ರೂಪಮಂ ಪೊಂದಿನೀ
ಬೆಳಗಲ್ಕೆ ಕೀರ್ತಿಯಿಂದೆರಡೇಳು ಲೋಕದೊಳ್
ಜಲಕಂಠ ಕಾರುಣ್ಯ ದಿಟ್ಟಿಯನ್ನೆಸೆದು ತಾಂ ಪಾಲಿಸಲಿ ಶೀಘ್ರದಲ್ಲಿ ||

ಕಮಲ ಮುಖಿ ಕರುಣಿಸಲಿ ಕೈಲಾಸಪತಿ ನಿನ್ನ
ವಿಮಲಮತಿಯಿಂ ಹರನ ಪಾದಮಂ ನೆನೆಯುತ್ತ
ಲಮಿತ ಭಕ್ತಿಯ ತಾಳ್ದು ಬಾಹ್ಯಲೋಕವ ಮರೆತು ಪರಮಾತ್ಮನಂ ಚಿಂತಿಸಿ|

ರಮಣೀಯ ರೂಪನಂ ನಿಲಿಸಿ ಹೃನ್ಮಂದಿರದಿ
ಕಮನೀಯ ಗುಣಗಳಂ ಜಾನಿಸಲ್ಕಾವಗಂ
ಕಮಲಾಕ್ಷನಂ ಕಂಡು ಧನ್ಯಳಾಗುವೆ ತರಳೆ ಪೋಗೆಂದನಾ ಕವೀರ ||

ನಿತ್ಯಮಾದುದ ಬಯಸಿ ಮರೆಯುತಭಿಮಾನಮಂ
ಚಿತ್ತದೊಳ್ ಶಿವರೂಪ ಚಿತ್ರಮಂ ಚಿತ್ರಿಸುತ
ಮತ್ತಮಿಾ ಭೂಲೋಕಗತಿ ಮರೆಯುತೇಕಾಂತದೊಳ್ಕುಳಿತು ಜಾನಿಸುತ್ತ |
ಎತ್ತಿ ಬಹ ವಿಘ್ನಮಂ ಸಹಿಸುತ್ತ ತಡೆಯುತ್ತ
ಸುತ್ತಲಿಹ ಸುಖಗಳಂ ಮಿಥ್ಯಮೆಂದರಿಯುತ್ತ
ನಿತ್ಯನಾದಾ ಹರನ ಪಾದ ಕಮಲಂಗಳಂ ನೆನೆಯುತಿರು ಜಾನಗೈದು ||

ತೊರೆದು ಬಹ ಫಲಗಳಂ ನೆನೆದು ಹರ ಪದಗಳಂ
ಮರೆತು ದುಃಖಂಗಳಂ ಪರಮಾತ್ಮಗರ್ಪಿಸುತ
ಸರುವ ಸುಖ ಕಷ್ಟಗಳ ಹರ ಜಾನದಿಂ, ಭರದಿ ತಪವೆಸಗು ಮಗಳೆ ನೀನು|
ಪೊರಮಡಲ್ಕಾಣತಿಯ ನೀಡುತಾ ಮುನಿಪತಿಯು
ತರಳೆಯಂ ತಕ್ಕೈಸಿ ತೊಡೆಯ ಮೇಲ್ಕುಳ್ಳಿರಿಸಿ
ಸುರಿಸಿದನು ಕಂಬನಿಯ ಹರುಷದುಃಖವು ಕೂಡಲೊಮ್ಮೆಗಾ ಋಷಿ
ಮನದೊಳು ||

ಬಿಡು ತಾತ ಚಿಂತೆಯಂ ನೀನು ಬೋಧಿಸಿದಂತೆ
ಮೃಡನಡಿಯ ನೆನೆಯುತ್ತ ದಿವ್ಯ ರೂಪವ ಕಂಡು
ಒಡನೆ ಬರುವೆನು ನಿನ್ನ ಸನಿಯಕ್ಕೆ ಪೊರಮಡುವೆನೆಂದಳಾ ಹರಿಣ ನೇತ್ರೆ |
ನಡೆದಾಗ ಸೇರಿದಳು ತಪವೆಸಗುವಾತರದೊ
ಳಡವಿಯಸ್ಸರಸುತ್ತ ಕುಸುಮ ಕೋಮಲೆ ಬೇಗ
ತೊಡೆದು ಮಮತೆಯನೆಲ್ಲ ನಾರುಡೆಯ ಧರಿಸುತ್ತ ಶಶಿಧರನ ಜಾನಿಸುತ್ತ ||

ಮರೆಯುತೀ ಲೋಕಮಂ ಶಾರೀರ ಮಮತೆಯಂ
ತೊರೆಯುತಿಂದ್ರಿಯ ಸುಖವ ಬರುವ ಫಲಗಳ ಮರೆತು
ಪರಮ ಸುಂದರ ದೇಹವಂ ದಂಡಿಸುತ ಮನದಿ ನಿಲಿಸಿ ಗೌರೀಧವನನು |
ಸ್ಮರಿಸಿ ಮನದೊಳಗೊಂದೆ ಜಾನದಿಂ ಸುಡುಮುಖನ
ತೊರೆಯುತಾಹಾರವಮಂ ಏಕಪಾದದಿ ನಿಂದು
ಅರೆದಿಟ್ಟಿಯಿಂ ತೊಟ್ಟು ನಿತ್ಯನಿಗಮಸ್ತುತ್ಯನಂ ನೆನೆದು ನಿಂದಿರುವಳು ||

ನೂರಾರು ವರ್ಷಂಗಳಿಂತು ಕಳೆದುದು ತಪದಿ
ಘೋರಾಟವಿಯೊಳಗೇಕಾಂಬರದಿ ನವ ತರುಣಿ
ಕ್ರೂರಾಹಿ ಭೂಷಣನ ನಾಮವೊಂದುಳಿಯುತಲಿ ಮಿಕ್ಕವಂ ತಿಳಿಯದಂತೆ |
ವಾರವಾರಕೆ ತೊರೆಯುತಾಹಾರಮೆಲ್ಲಮಂ
ಕಾರಿರುಳ್ ಪಗಲೆನ್ನದಾರೌದ್ರ ಬರಿಸಮಂ
ಸೋರುತಿಹ ಹಿಮಗಳಂ ಲೆಕ್ಕಿಸದೆ ಜೀವಾತ್ಮನಂ ಹರನ ಪದಮೂಲದಿ ||

ನಿಲಿಸಿ ನಿತ್ಯಾತ್ಮನಂ ತುತಿಗೈಯುತನವರತ
ತಳಮಳಿಸದಜಸುತೆಯು ನೇಸರಂ ನಿರುಕಿಸುತ
ಹಲವು ಕಾಲಂಗಳಂ ಕಟ್ಟುಗ್ರ ತಪದಿಂದ ಕಳೆಯಲ್ಕೆ ಸುರಲೋಕದ |
ಬಲಯುತರ್ ಪಲ್ಗಿರಿದು ಕೋಪದಿಂ ಜರೆಯುತಲಿ
ಹುಲುವನಿತೆಯೆಂದೊದರಿ ನೂಕಿದರು ದೂತರಂ
ಖಳತನದಿ ಖತಿಯಿಂದ ತರುಣಿ ತಪವಂ ಕಿಡಿಸೆ ಜಾರಿದರು ಭೂಲೋಕಕೆ ||

ದೇವರ್ಕಳುಂ ಕಂಡು ಬೆದರಿ ಬೀಳುತಲಾಗ
ಲಾವನಿತೆ ತಪಸಿನಿಂ ಪ್ರಾಣವಾಯುವ ತಡೆಯೆ
ನೋವಿನಿಂದುಸುರು ಬಿಡಲಾರದಾ ಸುರರು ಕಾವೇರಿಯಂ ತುತಿಯ ಕಿಡಿಸೆ|

ತೀವಿದುತ್ಸಾಹದಿಂ ಬಂದು ಪರಿಪರಿ ವಿಧದಿ
ಹಾವಳಿಯ ಮಾಡಿದರು ಕೇಡಿಗರು ಚೀರುತಲಿ
ಜೀವನವ ಸುರಿಸಿದರು ಭೂಮಿಯೊಳು ಹೊರಳಿದರು ಬೇಡಿದರು
ಕೈಮುಗಿಯುತ ||

ಮಾಡಲಾರದೆ ವಿಘ್ನ ಸೋತರಾ ಸುರರೆಲ್ಲ
ಬೇಡುತ್ತ ಬೆದರಿದರ್ ರಮಣೀಯಾ ನಿಷ್ಠೆಗಂ
ದೋಡಿದರು ಶಕ್ರನಂ ಕಂಡು ಪೇಳಿದರಾಗ ಕಾವೇರಿ ಮಹಿಮೆಯನ್ನು |
ಮಾಡುತಿರುವಳು ತರುಣಿ ಏಕಾಂತ ಭಾವದಿಂ
ಗಾಢ ತಪವಂ ನಿಂದು ಸೌಂದರ್ಯವತಿಯವಳು
ನೋಡಳೀ ಜಗವನ್ನು ತೃಣಕಿಂತ ಕಡೆಯಾಗಿ ಪರಿಗಣಿಸಿ ಜನಸುಖವನು ||

ಶಶಿಮೌಳಿಯಂ ಮನದಿ ಮೌನದಿಂ ಜಾನಿಸುತ
ಶಶಿಮುಖಿಯು ಘನ ಘೋರ ತಪವನ್ನು ಗೈದಿರ
ಲ್ಕಸವಸದಿ ಸುರರೆಲ್ಲ ಭಯದಿಂದ ಮೈಗಣ್ಣನನ್ನರಸಿ ಮೊರೆಯಿಟ್ಟರು |
ವಸುಮತಿಯೊಳೀ ಪರಿಯ ನಾರಿಯಂ ಕಂಡಂಜಿ
ಪಶುಪತಿಯ ಬಳಿಗೈದಿ ದೇವರ್ಕಳಂ ಕೂಡು
ತುಸುರಿದನು ಹದನವನು ಕಾವೇರಿ ಶಕ್ತಿಯನು ಬರ್ದಿಲರ ದುಗುಡವನ್ನು||

ಪಾರ್ವತೀರಮಣ ಕಾವೇರಿ ಗೈವತಪದಿಂ
ಸರ್ವದೇವತೆಯರಂ ಜೀವಕಟ್ಟಿಸುತಿಹುದು
ಚೀರ್ವಂತೆ ಮಾಡುತೀ ಪ್ರಾಣಮಂ ಸೆಳೆದಿಹುದು ದೇವಾರಮಂ ದಹಿಸುತ|
ಸಾರ್ವುದೀಗಲೆ ಶಿವನೆ ವರಗಳಂ ಕರುಣಿಸುತ
ಸರ್ವ ಸುರ ಜಾಲಮಂ ಸಲಹುವುದು ಕಾವೇರಿ
ಯೋರ್ವಳಂ ತಪದಿಂದ ವಿಮುಖಳಂ ಮಾಡುತ್ತ ಕೈಲಾಸವಾಸಬೇಗ ||

ಅವಳಾಸೆಯನ್ನಿತ್ತು ಜೀವದಾನವ ಮಾಳ್ಪ
ದವನಿಯೊಳಗುರುತರದ ಪದವಿಯಂ ನೀಡುತ್ತ
ತವಸಿನಿಯ ತಾಪದಿಂ ಬಳಲಿರುವ ಸುರರನ್ನು ಉಳುಹುವುದು
ಚಂದ್ರಧರನೆ |
ಅವನಿಯೊಳಗಾವನಿತೆಯಂತಿರುವ ನಾರಿಯರ
ನವಲೋಕಿಸಲ್ಕಾಣೆನೀ ಬಾಲೆ ದೇಹಮಂ
ಸವೆಸುತ್ತ ಶಿವನಾಮ ಜಪಿಸುತಲಿ ವನದೇವತೆಯ ತೆರದಿ ನವಯುವತಿಯು ||

ಕೇಳಿದನು ಪುರವೈರಿ ಸುರಪತಿಯ ಮೊರೆಯನ್ನು
ಲೀಲೆಯಿಂದಭಯವನ್ನೀಯುತ್ತ ಸುರಗಣಕೆ
ನೀಲ ಲೋಚನೆಯಿಂದ ಬಂದಿರುವ ಭಯವನ್ನು ಪರಿಹರಿಸೆ ಧೈರ್ಯವಿತ್ತು |
ಬೇಳಂಬವಂ ಬಿಡಿರಿ ವರಗಳಂ ನೀಡುತ್ತ
ಲಾ ಲಲನೆಯಂ ಧ್ಯಾನ ವಿಮುಖಳಂ ಗೈಯುವೆನು
ಭೂಲೋಕ ಕೈದುತಲಿ ಶೀಘ್ರದಿಂದೆಂದನಾ ವಾರಿಧರ ಸುರಪಾಲಗೆ ||

ತೆರಳಿದರು ಸುರರೆಲ್ಲ ಸಂತೋಷದಿಂ ಬಂದ
ಹರನಂಶದಿಂ ಜನಿಸಿ ಬುವಿಯೊಳಗಗಸ್ತ್ಯ ಮುನಿ
ತರುಣಿಯಂ ನಿರುಕಿಸಲ್ ಜವದಿಂದ ಬರುತಿರಲು ನೋಡಿದನು ರೂಪರಾಶಿ|
ಅರೆತೆರೆದ ಕಣ್ಗಳಿಂ ಮುಗಿದ ಕರಯುಗಳಿಂದ
ಶಿರಬಾಗಿ ನಿಂದಿರುವ ಬಾಲಕಿಯನೀಕ್ಷಿಸುತ
ಉರಿಗಣ್ಣ ತಾಪವಂ ಮಿರಿಸುವ ಮದನಶರ ಹತಿಯಿಂದ ನೊಂದನಾಗ ||

ಧರಿಸಿಹಳು ಕಂಠದೊಳ್ ರುದ್ರಾಕ್ಷಿ ಸರಗಳಂ
ಕರದಲ್ಲಿ ಪಿಡಿದಿಹಳು ಜಪಮಾಲೆಯೆಣಿಸುತಲಿ
ಹರನಾಮವಂ ನೆನೆದು ಮರೆತಿಹಳು ಜಗವನ್ನು ನಾರುಡೆಯ ನಾರೀಮಣಿ |

ಹರನಾಮ ಜಪದಿಂದ ಕಳೆಯೇರಿದಾ ಮುಖದ
ಪರಮ ಸೌಂದರ್ಯದಾ ಜವ್ವನದ ಸೆರೆಯಲ್ಲಿ
ಸುರಿಯುತಿಹ ರೂಪಮಂ ಕಂಡು ಮುನಿ ಮರುಳಾಗಿ ನಿಂದಿಹಂ
ಮುಗ್ಧನಾಗಿ ||

ತಪಮೈಮೆ ಬಲ್ಮೆಯಿಂದಾಶ್ರಮದ ಮಿಗಗಣವು
ತಪಸಿನಿಯ ಸೇವೆಯಂ ಗೈಯುತ್ತಲನವರತ
ಉಪವನದ ದುಷ್ಟತರ ಚಿರತೆ ಹುಲಿ ಜಂತುಗಳು ತೊರೆದಿಹವು
ದುಷ್ಟಜಾಲ |
ಕೃಪಣತೆಯ ಮರೆಯುತ್ತ ಭಕ್ತಿಯಿಂ ಶಿವನಾಮ
ಜಪಿಸುತಲಿ ಮೌನದಿಂ ಶಾಂತಿಯಿಂದಿರುತಿಹವು
ವಿಪರೀತವಮಂ ಕಂಡು ಹಿಗ್ಗಿದನು ಕಲಶಜನು ಮೆಚ್ಚುತಲಿ ವನಶೋಭೆಗೆ ||

ಇಂಪಾದ ಗಾನದಿಂ ಖಗಗಣವು ಪಾಡುತಿರೆ
ಸೊಂಪಿನಿಂ ನಿಂದಿರುವ ತರುಚಯವು ಫಲಮೂಲ
ಜೊಂಪೆಯಂ ನೀಡುತ್ತ ಮರುಗಮಲ್ಲಿಗೆ ಜಾಜಿವೂಗಳಿಂ ಪಪನಲೋಕ |
ಕಂಪಿನಿಂ ತುಂಬಿರಲ್ಕಾವನದ ಸೌಂದರ್ಯ
ತಂಪಿನಿಂ ಕಳೆಯೇರಿ ಶೋಭಿಸಲ್ ಶಿವಗಾನ
ದಿಂಪಿನಿಂ ಬಾಹ್ಯಜಗಮಂ ಮರೆತು ತಲ್ಲೀನನಾಗುತಲಿ ಹರನಡಿಯಲಿ ||

ಮನವಿಟ್ಟು ನಿತ್ಯಾತ್ಮನನ್ನರಸಿ ತೋಷಿಸುವ
ವನ ಸೊಬಗ ನೋಡುತ್ತ ಹಿಗ್ಗುತ್ತ ಮೈಮರೆತ
ಮುನಿಪತಿಯು ಕಣ್ದೆರೆಯುತಾ ತಪೋಜ್ವಾಲೆಯಂ ಭಾವಿಸುತ ಮನಸಿನಲ್ಲಿ|
ಎನಗೀಕೆ ಸತಿಯಿಹಳು ಎನ್ನನೇ ಬಯಸುತ್ತ
ಲನುನಯದಿ ತಪವೆಸಗಿ ನಿಂದಿರುವಳೆನ್ನುತ್ತ
ಸನಿಯಕ್ಕೆ ಪೋಗುತಲಿ ನಿಜರೂಪಮಂ ತೋರಿ ನಿಂದನಾ ಜಗದೀಶನು ||

ಕಾವೇರಿ ಕಂಡಳಾ ಚಿನ್ಮಯನ ರೂಪಮಂ
ಸಾವಧಾನದಿ ತೆರೆದು ಕಣ್ಗಳಂ ನೋಡಿದಳು
ಮೂವರನ ಮೂರುತಿಯು ನಿಂದಿರಲ್ಕಿದಿರಿನೊಳ್ ಬೀರುತಲಿ ತೇಜವನ್ನು |
ತೀವಿದೆಳನಗೆಯಿಂದ ಸಾಷ್ಟಾಂಗ ವಂದನೆಯ
ನಾವನಿತೆ ಮಾಡಿ ಮೌನದಿನಿಂದು ಶಿರಬಾಗಿ
ಭಾವಿಸುತ ಲೋಕೋಪಕಾರಮಂ ಶಿವರೂಪರಾಶಿಯಂ ನೋಡಿನಲಿದಳ್ ||

ಮೌನದಿಂ ನಿಂದಿರುವ ತರುಣಿಯನ್ನೀಕ್ಷಿಸುತ
ಗಾನಲೋಲನು ಪೇಳ್ದ " ಬಂದಿಹೆನು ಬೇಡಿನ್ನು
ನೀ ನನ್ನಿಯಿಂ ವರವ ಕಾವೇರಿ ನೋಡೆನ್ನನೆನ್ನ " ಲಾ ಹರಿಣ ನೇತ್ರೆ |
ಮೌನದಿಂ ಭೂಮಿಯನ್ನುಂಗುಟದಿ ಕೆದಕುತ್ತ
ಲೇಣಾಕ್ಷಿ ನಿಂದಿರಲ್ ಯೋಚಿಸುತ ಭಾವಿಸಿದ
ಮೌನೀಶನವಳಾಸೆ ಬಾಸೆಯಂ ನಯದಿಂದ ನುಡಿಸಿದಂ ಮೃದುವಚನದಿ ||

ಆಂ ಪತಿಯು ನಿನಗೆಂಬ ವಿಷಯಮಂ ಮರೆತಿರುವೆ
ಸಂಪನ್ನೆ ನೀಯೆನ್ನನರಿಯದಂತಿರುತಿರುವೆ
ಇಂಪಾದ ಶಿವಗಾನಮಂ ಕೇಳಿ ಮನಸೋತು ನಿನ್ನೆಡೆಗೆ ಬಂದೆ ನೋಡಿ |
ಸಂಪೂರ್ಣ ಮಾಡಿಸಲ್ ಭರದಿಂದ ನೀಂಗೈವ
ನೋಂಪಿಯಂ ಬಂದೆನಿದೊ ತಿಳಿದಿರುವೆ ಮನದಾಸೆ
ಯಂ ಪೂರ್ಣ ಚಂದ್ರಮುಖಿ ವರಿಸೆನ್ನ ಕರಪಿಡಿದು ನೀನೊಲಿಯು
ತನುರಾಗದಿ ||

ಎನ್ನ ಮನ ನಿನ್ನಲ್ಲಿ ಶಿಲ್ಕಿ ಸುಮಶರಹತಿಗೆ
ಭಿನ್ನ ಮಾಗಿಹುದೀಗ ನಿನ್ನ ಮನದಿಚ್ಛೆಯಂ
ತೆನ್ನನೇ ವರಿಸುತಲಿ ಪರಮ ಪಾವನೆಯಾಗು ಬೇಡುನೀ ವರಗಳನ್ನು |

ನ್ನಿಯಿಂ ನೀಡುವೆನು ನೋಡುವೆನು ನಲ್ಮೆಯಿಂ
ದಿನ್ನು ಬಿಡು ದುಗುಡಮಂ ಎನ್ನಲಾ ಕುಂಭಜನು
ಕನ್ನೆ ಕಾವೇರಿ ಮುನಿಪತಿಯ ತೇಜವ ಕಂಡು ಮೋಹದಿಂ ಮನಸಿನಲ್ಲಿ ||

ಓರೆಗಣ್ಣಿಂ ನೋಡಿ ಬಹಳ ದಿನಗಳ್ ಬಳಲಿ
ಬೇರಿಳಿದ ಬಯಕೆಯಂ ಪೊಂದುವಾತುರದಿಂದ
ಲಾ ರಮಣಿ ಸಂತೋಷಭರದಿಂದ " ಲಾಲಿಸಾದೊಡೆ ಶಿವನೆ ಪ್ರೀತಿಯಿಂದ|
ಮಾರಸೋದರನೆನ್ನ ಸುತೆಯಾಗಿ ಕರುಣಿಸಿದ
ಧಾರುಣಿಗೆ ಬಂದು ನಾಂ ಮಾನವರ ತೆರದಿಂ ಕ
ವೇರ ಮುನಿಯಾಶ್ರಮದಿ ಬೆಳೆದಿಹೆನು ನೀ ಬಂದು ನಿಜಪಿತನಯಾಚಿಸಿದೊಡೆ||

ನಮ್ಮಿಷ್ಟಾರ್ಥ ಕೈಗೂಡುವುದಕಾಗಿ
ನಮ್ಮ ಪಿತನಾಶ್ರಮಕೆ ಬರುವುದೈ ಭರದಿಂದ
ಬೊಮ್ಮಾದಿ ಸುರಗಣಕೆ ಕಾರ್ಯ ಕಾರಣ ಕರ್ತ ಸಕಲವಂ ನೀಂ ತಿಳಿದಿಹೆ |
ಒಮ್ಮನದಿ ಬಂದು ನೀನೆನ್ನ ಧನ್ಯಳ ಗೈದು
ಸುಮ್ಮಾನದಿಂ ಕರವ ಪಿಡಿವುದುಚಿತವು ಇದುವೆ
ಸಮ್ಮತವು ಜನಕಂಗೆ ಪೊರಮಡುವುದೆನ್ನಲಾ ವಾತಾಪಿರಿಪು ಪೇಳ್ದನು ||

ರಮಣಿ ಬರುವೆಂ ಮುಂದೆ ನಿನ್ನಿಷ್ಟದಂತೆ ನಾಂ
ಮಮತೆಯಿಂ ತವಪಿತನನುಜ್ಞೆಯಿಂ ವರಿಸುವೆನು
ಸಮನಾರು ನಿನ್ನ ಸೌಂದರ್ಯಕೀ ಧರೆಯೊಳಗೆ ಸಂದೆಗವ ಬಿಟ್ಟು ನೀನು |
ಸುಮತಿ ನೀ ಬೇಡೊಂದು ಬೇರೆ ವರವಂ ಕುಡುವೆ
ನಮಿತ ಪದವಿಯನೀವ ಕೀರ್ತಿಯಂ ಪೊಂದಲ್ಕೆ
ವಿಮಲೆ ಕೇಳೀಗಳೆನ್ನಲ್ಕವಳು ತೋಷದಿಂದಜನಾಜ್ಞೆಯನ್ನು ತಿಳಿದು ||

ಎಂದು ನಾನೇಕಾಂತದೊಳೋರ್ವಳೇ ನೆಲಸ
ಲಂದು ಪಾಪಂಗಳಂ ಪರಿಹರಿಪ ನದಿಯಾಗಿ
ಇಂದಿರಾರಮಣನನ್ನೊಡಗೂಡಿ ಪರಿವಂತೆ ಪಾಲಿಸೈ ಪ್ರಾಣೇಶನೆ |
ಎಂದ ಮಾತನು ಕೇಳಿ ಕುಂಭಜಂ ತೋಷದಿಂ
ಮುಂದೆ ನೀ ಕಾವೇರಿ ನದಿಯಾಗಿ ಲೋಕಮಂ
ಚಂದದಿಂ ಸಲಹುತ್ತ ಪಾಪಮಂ ದಹಿಸುತ್ತ ಕೀರ್ತಿಯಂ ಪಡೆವೆ ಭರದಿ ||

ಈ ವರದ ಬಲದಿಂದ ಪರಮ ಪಾವನಳಾದೆ
ಸೇವಿಸುವೆ ನಿಮ್ಮ ಪದ ಕಮಲಗಳ ನಾಂ ಮುದದೊ
ಳೀವಲಯದೊಳ್ಪರಮ ಪುಣ್ಯವಾಹಿನಿಯಾಗಿ ಪಾಲಿಸುವೆ ಜಗಮೆಲ್ಲಮಂ |
ಜೀವಿಗಳ್ ಜೀವನವ ಪಡೆಯುತ್ತ ಜೀವನವ
ಧಾವಿಸಲ್ ಸುಲಭಮಾದುದು ಕಾಂತ, ಧರೆಯೊಳಗೆ
ಜೀವನವನೊದವಿಸುವೆ ತವವರದ ಬಲ್ಮೆಯಂ ರಮಣ ನೀನೋಡೆಂದಳು ||

ಕಾವೇರಿ ಕುಂಭಜರು ನಡೆದರು ಕವೇರ ಮುನಿ
ಪಾವನಾಶ್ರಮಕಾಗ ಬಂದವರ ಕಾಣುತ್ತ
ತೀವಿದತಿಶಯದಿಂದ ಕರೆದು ಕೂರಿಸಿ ತನ್ನ ಕುವರಿಯಂ ಪ್ರೀತಿಯಿಂದ |
ಭಾವಿಸಿದ ಮನದೊಳಗೆ ಯೋಗಬಲದಿಂ ಮುನಿಯು
ವೈವಾಹದೊಳ್ ಕೊಡನ ಕುವರಂಗೆ ತರಳೆಯ
ನ್ನೀವೆನೆಂದಾರಿಸಿಯು ನಿಶ್ಚೈಸಿ ತೋಷದಿಂ ನುಡಿಸಿದನು ನಿಜತನುಜೆಯ ||

ಮಗಳೆ ನೀಂ ಕಟ್ಟುಗ್ರ ತಪದಿಂದ ಬಲುನೊಂದು
ಪಗಲುರಾತ್ರಿಗಳನ್ನು ಗಣಿಸದೆಲೆ ಹರನನ್ನು
ಬಿಗುಮನದಿ ಮೆಚ್ಚಿಸುತ ಧನ್ಯಳೆನ್ನಿಸುತಿಂದು ಕರೆತಂದೆ ಕಾಂತನನ್ನು |

ಮುಗುಳಿ ಬಂದಿಹ ನಿನ್ನ ಮನದ ಬಯಕೆಗಳನ್ನು
ಸುಗುಣಿ ಕೇಳ್ ಯೋಗ ಬಲದಿಂದರಿತೆ ನಾನೀಗ
ನಗವಾಸಿಯಂ ವರಿಸು ಬಾಳುನೀ ಚಿರಕಾಲ ಶಾಂತಿಯಿಂ ಕಾಂತನೊಡನೆ ||

ಅವನಿಯೊಳಗುಪಕಾರವೆಸಗುತಲಿ ಹದಿಬದೆಯ
ಸವಿ ಕಾರ್ಯಮಂ ಗೈದು ಪಾವನಳು ನೀನೆನಿಸು
ತವ ಕಾಂತನಂ ಕೂಡಿ ಸುಖಿಸೆಂದ ಮುನಿಪತಿಯು ಕುವರಿಯನ್ನಾಲಿಂಗಿಸಿ|
ಶಿವರೂಪ ಕುಂಭಜ ಮದೀಯ ಸುತೆಯಂ ವರಿಸು
ಬುವಿಯಲ್ಲಿ ಜನಹಿತದ ಕಾರ್ಯದೊಳ್ ತೊಡಗುತ್ತ
ಸವಿನಯದಿ ಶುಭವನ್ನು ಕೋರುತ್ತ ಬಾಳಿರೆಂದಾ ಋಷಿಯು ಪೇಳ್ದನಂದು||

ತರಳೆ ಕಾವೇರಿಯಂ ಕಲಶಜಗೆ ಧಾರೆಯ
ನ್ನೆರೆದಾಗ ಕನ್ನೆಯಂ ದಾನವಂ ಮಾಡಿ ಮುನಿ
ಪರಸಿದಂ ತೋಷದಿಂದಶ್ರುವಂ ಕರೆಯುತ್ತ ಸಂಸಾರ ಪಾಶದಿಂದ |
ತಿರೆಯೊಳಗೆ ಮುಕ್ತನಾಗುತ ಮುಂದೆ ಸನ್ಯಾಸ
ಕರುಮವಂ ವಹಿಸುತ್ತ ಪುತ್ರಿ ಜಾಮಾತರಂ
ತೊರೆದು, ತೊಲಗಿದ ತಪಕೆ ಧರ್ಮ ಬೋಧೆಯುಗೈದು ನಿಜಸುತೆಗೆ
ಮಮತೆಯಿಂದ ||

ವೈವಾಹ ಮುಗಿದೊಡನೆ ಶಾಸ್ತ್ರೋಕ್ತ ರೀತಿಯಿಂ
ಕಾವೇರಿಯೊಡಗೂಡಿ ಸಂಸಾರಧರ್ಮಮಂ
ಪಾವನನು ಕೈಕೊಂಡು ದಂಪತಿಗಳೀರ್ವರುಂ ತೆರಳಿ ಭರದಿಂ ಕಾಶಿಗೆ |
ತೀವಿದತಿ ಭಕ್ತಿಯಿಂ ವಿಶ್ವೇಶ್ವರನ ಪದವ
ಸೇವಿಸುತಲನವರತ ಭಕ್ತಿಪರವಶತೆಯಿಂ
ದಾವಗಂ ತೋಷದಿಂದಿರುತಿರ್ದರಾಯುಗಳು ಹರನಂಘ್ರಿ ಭಜನೆಯಲ್ಲಿ ||

ವಾರಣಾಸಿಯುು ಹರನ ಬೀಡಾಗಿರಲ್ ಬಂದು
ಸೇರಿದನು ಈಶ್ವರಾಂಶ ಶರೀರಿ ಕುಂಭಜಂ
ಸಾರುತ್ತ ಕಾಶಿಯೊಳ್ ಸತಿಯೊಡನೆ ಹಿತದಿಂದ ಸೌಖ್ಯದಿಂದಿರುತಿರ್ದನು |
ಆ ರಮಣಿಯಂ ಪೊರೆದು ಬೇಕಾದ ಸಾಧನವ
ನಾರಿಸಿಯುು ಭರದಿಂದ ಲೊದಗಿಸುತಲಾಗಾಗ
ಶ್ರೀರಾಮವಿಠ್ಠಲನ ನಾಮವನ್ನೆಡಬಿಡದೆ ಸತಿಯೊಡನೆ ಜಪಿಸುತಿಹನು ||



# ೫. ಕಾವೇರಿಯು ನದಿಯಾದುದು.



**ಸು**ರ ಸಮೂಹದೊಳಿಂದ್ರನುತ್ತಮಂ ತರುಗಳೊಳ್
ಸುರಭೂಜ ಫಲದಾಯಕಂ ಮೂರು ಮೂರ್ತಿಯೊಳ್
ಹರಿ ಸರ್ವ ಜಗಮಯನು ನದಿಗಳೊಳು ಕಾವೇರಿನದಿ ಪಾವನಂ ಜಗದೊಳು|
ಗಿರಿಗಳೊಳು ಮೇರು ಗಿರಿಯುನ್ನತಂ ಸನ್ನುತಂ
ಗಿರಿಯರಸನೆನಿಸುತ್ತ ಮೆರೆಯುವಂ ಬಲಯುತಂ
ಸರುವಗ್ರಹಂಗಳುಂ ಸುತ್ತುತಿರೆ ದಿನದಿನವು ಜಗಸೇವೆ ಗೈಯುತ್ತಲಿ ||

ನಗರಾಜನಂ ಬಳಸಿ ಸೂರ್ಯ ಚಂದ್ರಾದಿಗಳ್
ಮಿಗಿಲೆನಿಪ ಮೇರು ಪ್ರದಕ್ಷಿಣಂ ಗೈಯುತ್ತ
ಲೊಗುಮಿಗೆಯ ನೇಹದಿಂ ಸೇವಿಸುತ್ತಿರಲಾಗ ವಾರ್ಧಿಕ್ಯದಿಂ ನಗಪನು |
ಮಗನ ಮಂದರನನ್ನು ಕರೆದು ಪಟ್ಟವನಿತ್ತು
ನಗರಾಜನಧಿಕಾರಮಂ ನೀಡೆ ಯೋಚಿಸಲು
ನಗಕುಲವು ತೋಷಿಸಿತು ಮಂದರನ ಪೊಗಳುತ್ತಲಾತುರದಿ ನೋಡುತ್ತಲಿ ||

ಆಗಳಾ ವಾರ್ತೆಯಂ ಕೇಳುತ್ತ ವಿಂಧ್ಯ ತಾ
ನಾಗಸದ ತಾರೆಗಳ ನಾಳಲ್ಕೆ ಬಯಸುತ್ತ
ಲಾ ಗಿರಿಯ ರಾಜ್ಯಾಧಿಕಾರಮಂ ಪೊಂದಲ್ಕೆ ನಿಶ್ಚೈಸಿದಂ ಗಿರಿವರ |
ವೇಗದಿಂ ಗಗನಮಂ ಮುಟ್ಟುತಲಿ ಬೆಳೆಯುತಿರ
ಲಾಗರುವ ಪರ್ವತಂ ತನ್ನ ತಪ ಮಹಿಮೆಯಿಂ
ನಾಗುತಿರೆ ಸಾಸದಿಂ ದಿನದಿನವು ಪೆರ್ಚಾಗಿ ಶಕ್ತಿಸಾಧನೆಯಿಂದಲಿ ||

ಆ ಪರ್ವತಂ ಬಹಳ ಶಕ್ತಿವಂತಂ ಮತ್ತೆ
ತಾಪಸೋತ್ತಮನೆನಿಸಿ ಸಾಧಿಸಿದ ಮಹಿಮೆಯಂ
ದಾ ಪುನೀತಂ ಸಕಲ ಗಿರಿರಾಜನಾಗಲ್ಕೆ ಬಯಸಿದಂ ಮಾತ್ಸರ್ಯದಿ |
ಕೋಪದಿಂ ಸಕಲ ನಗ ಸಂದೋಹಮಂ ಮೀರು
ತಾ ಪರ್ವತಂ ಶ್ರೇಷ್ಠನೆನಿಸಲ್ಕೆ ಮಂದರನ
ರೂಪಕುಂ ಮಿಗಿಲಾಗಿ ಗಗನವಂ ಚುಂಬಿಸುತ ಬೆಳೆದನದ್ಭುತರೂಪಿನಿಂ ||

ಮುಚ್ಚಿದಂ ಗಗನಮಂಡಲವನ್ನು ಪರ್ವತಂ
ಪೆರ್ಚಿನಿಂ ಬೆಳೆಯುತಾವರಿಸುತ್ತ ದಿಶೆಗಳಂ
ಕಿಚ್ಚಿನಿಂ ಗ್ರಹಗಳಂ ತಡೆಯುತ್ತ ಮೇರುವಂ ಮೀರಿಸುವ ಗರ್ವದಿಂದ |
ಅಚ್ಚರಿಯ ತೋರುತ್ತಲದ್ಭುತಾಕಾರದಿಂ
ಮುಚ್ಚಿದಂ ಭೂವಲಯಮಂ ತನ್ನ ಶಕ್ತಿಯಿಂ
ಇಚ್ಛೆಯಿಂ ಗಿರಿರಾಜ ಪದವಿಯಂ ಪೊಂದಲ್ಕೆ ಬೆಳೆದನುನ್ನತಮಾಗುತ ||

ಹಿಮ ಶೈಲವಂ ಪಳಿದು ಮೇರುವಂ ಪಲ್ಗಿರಿಸಿ
ವಿಮಲ ಮಂದರಗಿರಿಯ ತಲೆಬಾಗಿಸುತ್ತ ತಾ
ನಮಿತ ಶಕುತಿಯ ಬಲದಿ ಬೆಳೆದನಾಗಸಪಥಕೆ ತಡೆದು ಸಕಲ ಗ್ರಹಗತಿ |
ತಮವು ಮುಚ್ಚಿತು ಬುವಿಯ ಸೂರ್ಯ ತಾಪದಿ ಬಳಲಿ
ಸುಮನಸೋತ್ತಮರೆಲ್ಲ ಬೆಂದುನೊಂದರು ಬಹಳ
ಅಮರ ಲೋಕವ ಸುಡುತ ದಾರಿಗಾಣದೆ ದಿನಪ ನಿಂದಲ್ಲೆನಿಂದನಾಗ ||

ದಿನಕರನ ಚಲನಕ್ಕೆ ತಡೆಯಾಗಲಾ ತಾಪ
ವನು ಸಹಿಸಲಾರದಿರೆ ದೇವರ್ಕಳೆಲ್ಲರಾ
ಸನಕಾದಿ ಮುನಿಸಹಿತ ಕೈಲಾಸಕೈತಂದು ಹರನಂಘ್ರಿಯೊಳ್ ನಮಿಸುತ |

ಅನಿಮಿಷರೆಲ್ಲರಾ ಶಿವನನ್ನು ಬೇಡುತ್ತ
ದಿನದಿನವು ವಿಂಧ್ಯಗಿರಿ ಬೆಳೆಯುತಿಹನುನ್ನತದಿ
ದಿನ ಪತಿಯ ಸಂಚಾರಮಂ ತಡೆದು ಲೋಕಮಂ ದಹಿಸುತಿಹ ಗರ್ವದಿಂದ||

ಸೂರ್ಯ ತಾಪವು ಪೆರ್ಚಿ ಸುಡುತಿಹುದು ಜೀವಿಗಳ
ನಾರ್ಯಧರ್ಮವ ತೊಳೆದು ತಡೆದಿಹನು ಸಕಲ ಜಗ
ಕಾರ್ಯಮಂ ವಿಧಿನಿಯಮಂ ಮೀರಿ ಗಗನಮಂ ಸೋಂಕುತಲಿ
ಬೆಳೆಯುತಿಹನು |
ಶೌರ್ಯಮಂ ತೋರುತಲಿ ಹಿಂಸೆಯಂ ನೀಡುತಲಿ
ಧೈರ್ಯದಿಂ ಕೆಡಹುವುದು ವಿಂಧ್ಯನಂ ಪುರರಿಪು
ತ್ವರ್ಯದಿಂ ನಿಗ್ರಹಿಸಿ ಲೋಕಮಂ ಸಲಹೆಂದೊಡಿಂತೆಂದ ನಗವಾಸಿಯು ||

ಕಾಶಿಯೊಳ್ ಕುಂಭಜನು ಸತಿಯೊಡನೆ ಸುಖದಿಂದ
ವಾಸಿಪನು ಶೀಘ್ರದಿಂದವನನ್ನು ಕೇಳಿದೊಡೆ
ಆ ಶಿಖರ ಮಕುಟಮಂ ಬೀಳಿಸುವನಿಳೆಯಲ್ಲಿ ಸುಲಭದಿಂ ಮೌನಿವರ್ಯ |
ಘಾಸಿಯಾಗದೆ ನೀವು ಪೋಗಿರೀಗಳೆ ವಾರ
ಣಾಸಿಯಂ ಜಯವಹುದು ನಿಮಗೆಂದು ಬೀಳ್ಕೊಟ್ಟ
ನಾ ಶೈಲವಾಸಿ ತಾಂ ಮುದದಿಂದ ಬಗೆಯುತ್ತ ಸಕಲಜಗ ಸಂತೋಷವಂ||

ಆತುರದೊಳೈತಂದು ಕಾವೇರಿಯಾಣ್ಮನಂ
ಮಾತನಾಡಿಸಿ ಮಣಿದು ವಿಂಧ್ಯನಂ ಭಂಗಿಸುವ
ರೀತಿಯಂ ಪೇಳಿದರು ಸುರರ ಸುಯ್ಯಂ ನೋಡಿ ಮರುಕಗೊಂಡನು ಮಾರಿಸಿ|
ಈ ತಪವ ಬಿಟ್ಟೈದಿ ವಿಶ್ವನಾಥನ ಸೇವೆ
ಯಾತುರಂ ಮರೆಯುತ್ತ ನಾನೆಂತು ತೊರೆಯುವೆನು
ಸೋತುದೆನ್ನಯ ಮನವು ಶಿವನಂಘ್ರಿಯೊಳ್ ಕಲೆತು ಗೈವೆನಿನ್ನೇನು
ಮುಂದೆ ||

ಆ ಶಿಖರ ಗರ್ವಮಂ ಮುರಿಯದೊಡೆ ಮೂಜಗವ
ನಾಶವಂ ಬಯಸುವನು–ಮಂದರನ ಭಂಗಿಸುವ
ಪೋಷಿಸಲು ನಿಮ್ಮ ನುಡಿ ಹರನಡಿಯ ತೊರೆಯುತ್ತ ನಡೆಯುವೆನು
ದಕ್ಷಿಣಕ್ಕೆ ।
ಆಸೆಯಿಂದುನ್ನತಿಯ ಪದವಿಯಂ ಬಯಸುತಿಹ
ನಾ ಶೈಲ ಕುಮತಿಯನ್ನೊರಗಿಸುತ ಧರೆಯ ಮೇಲ್
ಸಾಸದಿಂ ಮಂದರನ ನಿಲಿಸುವೆನು ಪಟ್ಟದೊಳ್ ವಿಂಧ್ಯಂಗೆ ಬುದ್ಧಿಪೇಳ್ದು ॥

ಹರನಂಘ್ರಿ ತೊರೆಯಲ್ಕೆ ಮರುಗುತಿಹ ಭಕ್ತನಿಗೆ
ಪುರಹರನು ಮೈದೋರಿ ನೀನೆಲ್ಲಿ ಚರಿಸಿದೊಡೆ
ಬರುತಿರುವೆನಲ್ಲಿಗಂ ನೆಲಸುವೆನು ನೀನಿರುವ ತಾಣದೊಳಗಾಕ್ಷಣದೊಳು ।
ಪರುವತನು ಗರ್ವದಿಂದುಬ್ಬಿ ಬೆಳೆದಿರೆ ಮೇಲೆ
ಹರಿದು ಬಟ್ಟೆಯ ಸೂರ್ಯ ಚಂದ್ರಾದಿಗತಿಗಳಿಗೆ
ಗರುವಮಂ ಭಂಗಿಸುತ ನಕ್ಷತ್ರ ಮಂಡಲವ ಸುಲಭಮಾಗಿಸು ಕುಂಭಜ ॥

ಸಾಮದಿಂ ದಂಡಿಸುತ ಭೂಸುರನ ಸುಲಭದಿಂ
ದೀ ಮಹೀ ತಲದಲ್ಲಿ ಗರ್ವದಿಂ ಮೆರೆಯುತಿಹ
ಕಾಮರೂಪರ ಸದೆದು ಸಹ್ಯಾದ್ರಿಯೊಳ್ ನೆಲಸಿ ಜಗವನ್ನು
ಪೊರೆಯುತಿಹುದು ।
ಭಾಮಿನೀ ಕಾವೇರಿ ಮುಂದೆ ಲೋಕೋದ್ಧಾರ
ಕಾಮನೆಯ ಕೈಕೊಂಡು ನದಿಯಾಗಿ ಪರಿಯಲ್ಕೆ
ಭೂಮಿಯೊಳ್ ನೆಲಸುವೆನು ಕಾವೇರಿ ತೀರದೊಳು ನಡೆ ನೀನು
ಮನಮರುಗದೆ ॥

ಆ ತಪೋಧನ ಶಾಂತ ಮನಸಿನಿಂ ನಮಿಸುತ್ತ
ಲಾತುರದಿ ಶಿವನಂಘ್ರಿಯುಗ್ಮದೊಳ್ ಮನ್ನಣೆಯ
ಕಾತರದಿ ಬೇಡಿದನು ಸುರಗಣವ ಮನ್ನಿಸುತ ಪೊರಮಟ್ಟದಕ್ಷಿಣಕ್ಕೆ ।

ಮಾತೆ ಕಾವೇರಿಯುಂ ಕೂಡಿ ತೆಂಕಣದೆಸೆಗೆ
ಮಾತಪದೊಳಾಗಸಕೆ ಬೆಳೆದಿರ್ಪ ವಿಂಧ್ಯನಂ
ಮಾತನಾಡಿಸೆ ಮುನಿಯು ಬಯಸುತ್ತ ಬರುತಿರ್ಪ ವಿಶ್ವನಾಥನ ಜಾನದಿಂ||

ಕಾವೇರಿ ಮನದೊಳಗೆ ಶಂಕರನ ರೂಪಮಂ
ಭಾವನೆಯ ಮಾಡುತ್ತ ಪೊಗಳುತ್ತ ಮಹಿಮೆಯಂ
ತೀವಿರುವ ಭಕ್ತಿಯಿಂ ಪತಿಯೊಡನೆ ಸರಸದಿಂ ನಡೆದಿರಲ್ ತವರೂರಿಗೆ |
ಧಾವಿಸುತ ಮಾರ್ಗಮಂ ದೂರದಿಂ ವಿಂಧ್ಯನಂ
ಪಾವನಂ ನೋಡುತಂದಾ ಶಿಖರ ತಪಮಹಿಮೆ
ಏವೇಳ್ವೆನೆಂದುಸುರಿದಂ ಸತಿಗೆ ಬರಿದೆ ಗರುವದಿ ಕೆಡುವನಿವನೆಂದು
ಮರುಗುತ್ತಲಿ ||



ಗಳಿಸಿದಂ ತಪದಿಂದ ಬಲು ಮಹಿಮೆಯನ್ನಜಲ
ನೆಳಲಾಸೆಗಂ ಪೋಗಿ ಫಣಿಫಯನ ಹಸ್ತದೊಳ
ಗೊಳಿತಾದ ಜೇವಮನ್ನೊಪ್ಪಿಸುವ ಕಪ್ಪೆವೊಲ್ ತಪಮೆಲ್ಲ ವ್ಯರ್ಥಮಾಗೆ |
ಖಿಲಗೈವ ಪುಣ್ಯಮಂ ಬಯಲಾಸೆಯೊಳು ಸಿಲ್ಕಿ
ಬಳಲಿಸಿದ ಲೋಕಮಂ ವಿಪರೀತವೆಸಗುತ್ತ
ಮಲಗಿಸುವೆನಿವನನ್ನು ಭೂಗತನ ಮಾಡಿಸುತಲೆಂದನಾಮೌನೀಶನು ||

ಮರುಗಿದಳು ಕಾವೇರಿ ಪತಿಯ ನುಡಿಯಂ ಕೇಳಿ
ಕರುಣಮಂ ಭೂಸುರಗೆ ತೋರೆಂದು ಬೇಡಿದಳು
ಪೊರೆಯುಲ್ಕೆ ಜಗವನ್ನು ಗರುವಮಂ ನಿಗ್ರಹಿಸುತುಳುಹುತ್ತ ಜೇವವನ್ನು |
ಪರಿಪರಿಯ ರೀತಿಯೊಳ್ ಶಕ್ತಿಯಂ ಪೊಗಳಿದಳು
ಜರೆಯುತ್ತಲಾ ತಪದ ಬಲ್ಮೆ ಕಾಳಾಯ್ತೆಂದು
ಬರುತಿರಲು ಸೇರಿದರು ವಿಂಧ್ಯಾದ್ರಿ ಮೂಲಮಂ–ಕಂಡನಾ ಪರ್ವತೇಶ ||

ಬಂದ ಭೂಸುರಯುಗಳ ಮುದದಿಂದ ಸಾಷ್ಟಾಂಗ
ವಂದಿಸಿದ ಪಾದ ಧೂಳಿಯುಧರಿಸಿ ನುಡಿಸಿದನು
ಇಂದು ನಿಮ್ಮನು ಕಂಡು ಜನುಮ ಸಾರ್ಥಕವಾಗೆ ಧನ್ಯನಾದೆನು ಧರೆಯಲಿ|
ಸಂದುದ್ಯೆ ಮುನಿಯುಗಳ ದರುಶನದ ಲಾಭವೆನ
ಗಿಂದು ದೊರೆಕಿತು ಪುಣ್ಯ ಬೇಡುವೆನು ಸಿಮ್ಮಡಿಯು
ಮುಂದೆ ಮಾಡುವ ಕಾರ್ಯವೇನೆಂದು ಬೆಸಸುವ್ರದು ಮುನಿಯೆಂದೊ
ಡಿಂತೆಂದನು ||

ಗಿರಿವರನೆ ನೀಂ ಗೈದ ತಪಯಜ್ಞದಿಂ ಲೋಕ
ಸೊರಗಿದ್ಧುದು, ಮೂಲೋಕ ಕರಗಿದುದು, ಸುರಲೋಕ
ನಿರುಕಿಸುತ ನಿನ್ನಿರವ ಭೀತಿಯಿಂ ಬಳಲಿದುದು ತಡೆಯುದೆಯೆಬಲುಬಾಧೆಯಂ|
ಪೊರಮಡಲ್ಕೆನಗೀಗ ಸಮಭಾಗನಾಗಿ ನೀಂ
ಭರದಿ ದಾರಿಯು ಬಿಡೆನಗೆನ್ನಲಾ ಏಂಧ್ಯ ಭೂ
ಸುರವರಗೆ ಹಾದಿಬಿಡೆ ಮುಂದೆ ದಾಟಿದ ಮುನಿಯು ಸತಿಯೊಡನೆ
ಸುಲಭದಿಂದ ||

ಅತ್ತ ಸಾಗಿದ ಮೇಲೆ ಮಲಗಿರುವ ಪರ್ವತನ
ಕೃತ್ಯಮಂ ನೆನೆನೆನೆದು ಮುನಿ ಪೇಳ್ದ ನಿಂತೆಂದು
ಮತ್ತನಾಗುತ ನೀನು ಗರ್ವದಿಂ ಬೆಳೆದಿರುವೆ ಮರೆತು ನಿನ್ನಯ ಕಾರ್ಯವಂ|
ಮತ್ತೆ ನಾ ಬರುವನಕ ಮಲಗಿಕೊಂಡಿರು ನೀನು
ಎತ್ತಲಾಗದು ಶಿರವ ಭೂಶಾಯಿಯಾಗಿಹುದು
ಮತ್ತೆ ಕಾಣುವೆನೆಂದು ದಕ್ಷಿಣಕೆ ಸಹ್ಯಾದ್ರಿಗೈದಿದನು ಸತಿಯ ಕೂಡಿ ||

ನೆಲಸಿದನು ಕಾವೇರಿಯೊಡಗೂಡಿ ಕೆಲಕಾಲ
ಕಳೆಯುತಿರಲೊಂದುದಿನ ಸತಿಯೊಡನೆ ಪೇಳಿದನು
ಜಲರೂಪಮಂ ಧರಿಸಿ ನೀನೆಲಸು ಕೊಡದೊಳಗೆ ಕನಕೆಯೊಳ್ ಮಿಂದು
ಬರುವೆ |

ಬಳಲಿರುವೆ ನೀನೀಗ ಸಂಚರಿಸುತೆನ್ನೊಡನೆ
ಬಳಲಿಕೆಯನೀಗಲ್ಕೆ ಜಲಕಮುಂಡಲಿನೊಳಗೆ
ನೆಲಸು ಶರರೂಪಿನಿಂದೆಂದೊಡಾ ಕಾವೇರಿ ಪೊಕ್ಕಳಾ ಪಾತ್ರೆಯೊಳಗೆ ||

ಕನಕೆಯೊಳ್ ಮಿಾಯಲ್ಕೆ ಬಯಸುತಾ ಮುನಿಪತಿಯು
ಮುನಿಸುತರ ಶಿಷ್ಯರಂ ಕರೆದಿತ್ತ ನಿಜ ಕೊಡವ
ನಿನಿಯಳಿಹಳಿದರಲ್ಲಿ ಜಲರೂಪಮಂ ಧರಿಸಿ ನೀವಿದನು ಜೋಕೆಯಿಂದ |
ಅನವರತ ನೋಡುವುದು ನೆಲದ ಮೇಲಿರಿಸದಿರಿ
ಕನಕೆಯೊಳ್ ಮಿಂದು ಬಹೆ ಕಣ್ಣಿಟ್ಟು ಕಾಯುತಿರಿ
ಮನವಿರಲಿ ಜಲಬಿಂದು ಹೊರಸೂಸದಂತೆ ನೀವ್ ನೋಡುತಿರಿ
ಮಮತೆಯಿಂದ ||

ಎಂದಾಗ ಬಿಸಸುತ್ತಲಾ ಕಮುಂಡಲುವನ್ನು
ತಂದಿತ್ತು ಮಿಾಯಲ್ಕೆ ನದಿಯರಸುತಾ ಮುನಿಪ
ನಂದು ತೆರಳಲು ದೂರ ಜಲರೂಪಿ ಕಾವೇರಿ ತನಗಿದುವೆ ಸಮಯಮೆಂದು|
ಅಂದು ತಾತನು ಪೇಳ್ದ ನುಡಿಗಳನು ನೆನೆಯುತ್ತ
ಲಿಂದೆನಗೆ ಸುಮುಹೂರ್ತ ನದಿಯಾಗಲಿಳೆಯೊಳಗೆ
ವಂದ್ಯಳೆನಿಸಲ್ ಸಮಯಮೆಂದರಿತು ಸಿದ್ಧಳಾದಳು ರಮಣಿ ಹೊರಚೆಲ್ಲಲು||

ವೈವಾಹ ಕಾಲದೊಳ್ ರಮಣನೇ ಪೇಳಿಹನು
ಆವಾಗ ನಾಂ ನಿನ್ನ ಬಿಟ್ಟಿರುವ ಸಮಯದೊಳ್
ತೀವಿರುವ ಜಲದಿಂದ ನದಿಯಾಗಿ ಸಾಗೆಂದು ನುಡಿದಿಹನು ನಿಜನಾಥನು |
ಈ ವಿಧದೊಳಕ್ಷಯದ ಕೊಡದೊಳಗೆ ನಾನಿರ-
ಲ್ಕಾ ವೇಳೆಯೊಳ್ನಾನು ನದಿಯಾಗ ಬಹುದೆಂದು
ಜೀವದಾತನು ಪೇಳ್ದನಾವಾಣಿಯನ್ನಿಂದು ಪಾಲಿಸಲ್ ಸಮಯವಿದುವೆ ||

ಎಂದು ಯೋಚಿಸುತಿರಲು ಶಿಷ್ಯರೆಲ್ಲರು ಕೂಡಿ
ಮುಂದಿರುವ ಪಾತ್ರೆಯಂ ಜಾಗರೂಕತೆಯಿಂದ
ಮಂದಿಯೆಲ್ಲರು ನೋಡುತಿರುವ ಸಮಯದೊಳಂದು ವಿಧಿವಶದಿ
ನೆಲಕುರುಳಲು |
ಸುಂದರೀ ಮಣಿ ಇರುವ ಪಾತ್ರೆ ಬೀಳಲು ಕೆಳಗೆ
ಇಂದುವದನೆಯು ಜಲದ ರೂಪಿನಿಂ ಹೊರಬಂದು
ಮುಂದೆ ಹೋದಳು ಹರಿದು ಮುದದಿಂದಲಿಷ್ಟಾರ್ಥ ಕೈಗೂಡೆ ಕಾವೇರಿಯು ||

ಕರಗಿದುವು ಕಲ್ಲುಗಳ್ ಕಾವೇರಿಯುದಯದಿಂ
ಬೆರಗಾಗಿ ಖಗ ಮಿಗವು ನಿಂದುನೋಡಿದುವಂದು
ತರುಗಳೆಲ್ಲವು ಜೀವ ಪೊಂದಿದೆವು ತಾವೆಂದು ತಂಬೆಲರ ಸೂಸುತ್ತಲಿ |
ಸುರಿಸುತ್ತ ಹರುಷ ಜಲ ಕಲ್ಮನಂಗಳ ತೊರೆದು
ಶರವರ್ಷದಿಂ ಮಾಯೆಯನು ಸೆಳೆದು ಮುಳ್ಳೆಳೆದು
ಹರಿದೈದಿ ಸೇರಿದಳು ಸಜ್ಜನರ ಮನವೊಲಿಸಿ ದುಷ್ಟರಂ ಶಿಷ್ಟರೆನಿಸಿ ||

ಪಾರಿದುವು ವಾರಿಗಳ್ ಕುಂಭಜನ ಕೊಡದಿಂದ
ಧಾರುಣಿಯ ಭಕ್ತರಂ ನಾಕಕೇರಿಸುವಂತೆ
ತಾರಕಾಮಂಡಲದಿ ಸೇರಿನಲಿನಲಿದಾಡಿ ಹೊಳೆದಿರಲ್ ತಮವ ತೊಳೆದು |
ಆರಿಸುತ ದಾರಿದ್ರ್ಯ ಪಾತಕವನುದುರಿದುವು
ಸೋರಿದುವು ಪೀಯೂಷಮಂ ತಂದು ನೀಡುತ್ತ
ನಾರಿಯರ ನಗಿಸುತ್ತ ಪುರುಷರನ್ನೊಲಿಸುತ್ತ ಜೀವಿಗಳ ಜೀವಕಾಯ್ದು ||

ಕಾವೇರಿಯುದಯಿಸಲು ನದಿಯಾಗಿ ಮುಗಿಲೊಡೆಯ
ತೀವಿದೆಳನಗೆಯಿಂದ ಮುಗಿಲೊಡ್ಡನೊಡ್ಡುತಲಿ
ಧಾವಿಸಿದ ಗಗನದಿಂ ಸುರಿವ ಸುರಿಮಳೆಯಿಂದ ಹನಿಗಳಿಂದೋಡಿ ಬಂದು |

ಆವಗಂ ಜಲಪೂರ್ಣಮಾಗಿರಲ್ಕೀ ನಧಿಯ
ನಾ ವರ್ಷರಾಜ ತಾಂ ಪರಸಿದನು ಪದುಳದಿಂ
ಪಾವನಳ ಪಾತ್ರದಲಿ ಪುಷ್ಪವರ್ಷವ ಕರೆದು ನೀಡಿದನು ಭಾಗ್ಯರವಿಯ ||

ನೋಡಿದುದು ಶಿಷ್ಯಾಳಿ ಭಯದಿಂದ ಮರುಗುತ್ತ
ಲೋಡುತಿಹ ಜಲಮಯುವ ನೋಡುತಲಿ ಕಾರ್ಯವನು
ಮಾಡಲಾರದೆ ಮರೆತು ಕಾವೇರಿಯಂ ಪಾಡಿ ಬೇಡಿದರು ಭಕ್ತಿಯಿಂದ |
ಮೂಢರಾದೆವು ನಾವು ಮುಗ್ಧತನದಿಂ ಕೊಡವ
ನೋಡದಿರೆ ನೀಂ ಬಿಟ್ಟು ಹೊರಟಿರುವೆ ನದಿಯಾಗು
ತೋಡಿಪೋಪುದು ಯುಕ್ತವಲ್ಲ ದೇವಿಯೆ ಮರಳಿ ಬರಬೇಕುದಯದಿಂದಲಿ ||

ಗುರು ಶಾಪಕಿತ್ತೆಮ್ಮ ನೀನಿಂದು ತೆರಳುವುದು
ಸರಿಯಲ್ಲ ಕರುಣದಲಿ ಸೇರುತಲಿ ಪಾತ್ರೆಯೊಳು
ಭರದಿಂದ ಸಲಹೆಮ್ಮ ಮಾತೆ ಬೇಡುವೆ ನಿಮ್ಮ ಚರಣದೊಳ್ ದೇಹವಿಟ್ಟು |
ಗುರುಗಳಾಜ್ಞೆಯ ಮೀರಿ ಪಾಪಕೂಪದಿ ಶಿಲ್ಕಿ
ಗುರುಶಾಪಕೆಡೆಯಾಗಿ ಕೆಟ್ಟುಹೋಗುವೆವಿಂದು
ಪರಿಪಾಲಿಸಮ್ಮ ನೀಂ ಮರಳುಗುರುವೆಡೆಗೀಗಲೆರಗುವೆವು ಶಿರಬಾಗುತ ||

ವಿಧಿವಶದಿ ತಪ್ಪಾದುದೆಮ್ಮಿಂದಲೀ ದಿನವು
ವಿಧಿಸುತೆಯೆ ತವ ಮಹಿಮೆಯರಿಯದೆಯೆ ಜಲಪಾತ್ರ
ವಿದನಿಂದು ಧರೆಯಮೇಲಿಡಲು ನೀ ಕುಪಿತಳಾಗುತ ಪರಿದೆ ನದಿಯಾಗುತ |
ಮುದವಾಂತು ಮನ್ನಿಸುತ ಜಲಕಮಂಡಲುವನ್ನು
ವಿಧುಹಾಸೆ ಸೇರುತಲಿ ಗುರು ಕೋಪದಿಂದುಳಿಸು
ಪದುಮ ಪಾದಗಳನ್ನು ನಮಿಸುವೆವು ಧರ್ಮದೇವಿಯೆ ನಿಮ್ಮ
ಪೂಜಿಸುವೆವು ||

ಆದಿಶಕ್ತಿಯು ನೀನು ಆದ್ಯಾಂತ ರಹಿತೆ ಜಗ
ದಾದಿ ಮೂರುತಿ ಮಾಯೆ ನಿನಗಾಟವಾಗಿಹುದು
ಈ ಧರಿತ್ರಿಯ ಯಾತ್ರೆ ಮಾಯೆಯೊಳಗಡಗಿಹುದು ಲೋಕಸಂಗ್ರಹ
ನೆಪದೊಳು |
ಮೇದಿನಿಯ ನದಿಯೆಂಬ ರೂಪಿನಿಂ ಹರಿಯುವೆಡೆ
ಸಾಧುವೆನಿಪುದೆ ತಾಯೆ ನದಿಯಾಗದಿರೆ ನೀನು
ಬಾಧೆಯಾವುದು ನಿನಗೆ ಶಿಷ್ಯರೆಮ್ಮನು ಶಾಪಕೂಪದಿಂ ತಪ್ಪಿಸುವುದು ||

ಸಾಧುವೆನಿಪುದೆ ಮಾತೆ ಪಸುಳೆಯಳುವುದ ಕಂಡು
ಮೋದ ಪಡೆವಳೆ ತಾಯಿ ನೀನೆಮ್ಮ ಪೆತ್ತಮ್ಮ
ಶೋಧಿಸದೆ ನಮ್ಮರವ, ಕರುಣಮಂ ತೋರೆಮಗೆ ಹೊಸರೂಪ
ನೀತೊರೆಯುತ |
ಮಾಧವನ ವಕ್ಷದೊಳ್ ಮೆರೆವ ಮಾಧವಿಮನವ
ಶೋಧಿಸಲ್ಕಳವಲ್ಲವೆಮ್ಮಿಂದ ವನರೂಪಿ
ಯಾದ ನಿನ್ನಂ ಕರೆದು ಬೇಡುವೆವು ಬಾ ತಾಯೆ ಸುತರೆಮ್ಮ ನೀ ಕಾಯೆಯ||

ಮೊರೆಯನಾಲಿಸುತಾಗ ಕಾವೇರಿ ಕರುಣದಿಂ
ಮರುಗದಿರಿ ಕೊರಗದಿರಿ ಪತಿಯಾಜ್ಞೆಯಿಂ ನಾನು
ವರನದಿಯ ರೂಪದಿಂ ಪರಿದೆನೀ ತಿರೆಯಲ್ಲಿ ಲೋಕಜನಹಿತಕಾಗಿಯೆ |
ಶರರೂಪದಿಂದಿರಲು ಪತಿಕಮಂಡಲುವೊಳಗೆ
ತೊರೆದೆನ್ನ ಪೋದಾಗ ನಾಥನಾದಿವಸದೊಳು
ತರಳೆ ನದಿಯಾಗೆಂದು ವಿಧಿಸಿಹನು ನಿಮ್ಮ ಗುರು ಭಯಬಿಡಿರಿ ನಿಮ್ಮ ಭಯವ||

ಮುನಿ ಕುಮಾರರೆ ನಾನು ಧರೆಗಿಳಿವ ಕಾಲದೊಳ್
ವನಜ ಪೀಠನು ವರವನಿತ್ತಿಹನು ನದಿಯಾಗೆ
ಎನಗಿಂತು ತಾತ ನಾಥರ ವಚನವಿರೆ ಜಗವ ಪಾಲಿಸಲು ನದಿಯಾದೆನು |

ಮುನಿಪತಿಗೆ ಮುನಿಸಿಲ್ಲ ನಿಮಗಿನ್ನು ಭಯವಿಲ್ಲ
ಮುನಿಮನವನರಿತಿಹೆನು ನಿಮಗಾಗಿ ಬೇಡುವೆನು
ಎನಗಿನ್ನು ಮಾರ್ಗವನು ಬಿಡಿರೀಗ ಮನ್ನಿಸಿರಿ ವಚನವಂ ಖತಿಗೊಳ್ಳದೆ ||

ಇಂತೊರೆದು ಶಿಷ್ಯರಂ ಸಂತೈಸಿ ಪೋಗುತಿರೆ
ಚಿಂತೆಯಿಂ ಮುನಿಸುತರು ನದಿಗಡ್ಡ ನಿಲ್ಲುತ್ತ
ಪಿಂತೆ ಬರುವುದು ಮಾತೆ ಗುರುವಿನಾಜ್ಞೆಯ ಪಡೆದು ನೀಂ ತೆರಳು ನದಿಯಾಗುತ |
ಇಂತುಳುಹು ಮುದದಿಂದ ಕುವರರಂ ಕರುಣದಿಂ
ದಂತರಾತ್ಮಳೆ ನಿನ್ನ ಮುಂದೆ ಸಾಗಲು ಬಿಡೆವು
ಪಿಂತೆರಳು ಪಿಂತೆರಳು ಬೇಡುವೆವು ಕೈಮುಗಿದು ಬಾರೆಂದು ಪ್ರಾರ್ಥಿಸಿದರು||

ತರವಲ್ಲ ನಿಮ್ಮ ಛಲ ಪತಿಯಾಜ್ಞೆ ಇಹುದೆನಗೆ
ಪರಸತಿಯು ಸಾರಿರಲು ನಿಜರಮಣಿ ಮರೆಯುತಲಿ
ಧರಣಿಯೊಳಗಿಳಿಯುತ್ತ ನದಿಯಾಗಿ ಸಾಗೆಂದು ಕಾಂತನಾಗಲೆ ಪೇಳಿಹಂ |
ಮರೆತೆನ್ನನಿಂದು ತಾಂ ಕನಕೆಯೊಡಗೂಡುತಲಿ
ಸರಸದಿಂದಿಹನಲ್ಲಿ ಪರಿದೆ ನಾನಿಂದಿಲ್ಲಿ
ತೊರೆದು ನರರೂಪಮಂ, ಶಾಂತಿಯಿಂ ಪೋಗಿರೆಂದಾ ತರುಣಿ ಸಂತೈಸಲು ||

ನದಿಯು ಮುಂದಕೆ ಬಿಡದೆ ಶಿಷ್ಯಾಳಿ ನದಿಪಾತ್ರ
ಕೆದುರಾಗಿ ಸಾಲ್ಗಟ್ಟಿ ಪರಿವ ಜಲಮಂ ತಡೆದು
ಮದಿರಾಕ್ಷಿ ಪೋಗದಿರು ಪೋಗದಿರು ತಡೆಯೆಂದು ದುಃಖದಿಂ ಬೇಡುತಿರಲು|
ನದಿಯಾದ ಕಾವೇರಿಯುರಘುಳಿಗೆ ಚಿಂತಿಸುತ
ಲದುಮಿ ಭೂಮಿಯನಂದು ಧರೆಗಿಳಿದು ಕಾಣದೆಯೆ
ಹದಿಬದೆಯು ಗುಪ್ತಗಾಮಿನಿಯಾಗಿ ಬಹುದೂರ ತಿರೆಯೊಳಗೆ ಪೋದಳವಳು||

ಕನಕೆಯೊಳು ವಿಹಾಯುತಿರೆ ಕಾವೇರಿ ನದಿಯಾಗೆ
ಮುನಿಪತಿಯು ಮನದಂದು ನಿಮಿಷದೊಳಗೈ ತಂದು
ಇನಿಯಳನ್ನರಸುತ್ತ ಗುಪ್ತಗಾಮಿನಿಯೊದ ಕಾವೇರಿಯಂ ಕರೆಯುತ |
ಕನಕೆಯೊಳ್ ಸ್ನಾನಕ್ಕೆ ಪೋದೆನೆಂಬಾ ರೋಷ
ನಿನಗೇಕೆ ಬಾಧಿಸಿತು ನೀನಿಂತು ಪೊರಮಡಲು
ನಾನೆಂತು ಜೀವಿಸಲಿ ಕಾಂತೆನೋಡೆಮ್ಮ ನೀಂ ಬಿಟ್ಟೆಮ್ಮ ಪೊರಮಡುವೆಯ ||

ತಾತನಾಣತಿಯುಂಟು ನಾನಿತ್ತ ವಚನವಿದೆ
ಮಾತನಾಡದ ತೆರದೆ ಗೈದು ನೀನಿಂದುಮುಖಿ
ನೀ ತೊರೆದು ಪೋಪುದುಚಿತವೆ ರಮಣಿ ಬಾರೆನ್ನ ಸೇರಿಂದು ಬಂದು ಮುದದಿ|
ಪ್ರೀತಿಯಿಂ ನೀ ಬಂದು ಕೂಡೆನ್ನ ಜೀವಸಖಿ
ಏತಕೀ ಪರಿಯಲ್ಲಿ ಪೊರಮಡುವೆಯಾತುರದಿ
ಮಾತನಾಡೆನ್ನೊಡನೆ ನಿಜರೂಪದಿಂ ಬಂದು ಧರೆಯೊಳಿಹುದೆಂದಿನಂತೆ ||

ಕಾಂತನಾಡಿದ ನುಡಿಯನಾಲಿಸುತ ಶಶಿವದನೆ
ಶಾಂತನಾಗೈ ಕಾಂತ ವೈರಾಗ್ಯ ಗುಣವಂತ
ಭ್ರಾಂತಿಯಂ ನೀ ತೊರೆದು ತರಳೆಯಂ ಕ್ಷಮಿಸಿಂದು ಬೇಡುವೆನು
ಸೆರಗೊಡ್ಡುತ |
ಆಂ ತಳೆದು ಜಲರೂಪ ನೀನಿಲ್ಲದಿರೆ ನಡೆದೆ
ಕಾಂತ ಕೇಳೆನ್ನ ವಿಧಿಯಂತೆ ನಾಂ ಪರಿದಿಹೆನು
ಶಾಂತಿಯಿಂ ಪರಿಪಾಲಿಸೆನ್ನ ನೀಂ ಪರಿಶುದ್ಧೆ ಪಾವನಳು ಎಂದೆನಿಸುತ ||

ಮೋದವಾಂತೆನು ಕಾಂತೆ ಮತಿವಂತೆ ಗುಣವಂತೆ
ಸಾಧುವಾಗಲಿ ನಿನಗೆ ಸಪ್ತ ತೀರ್ಥಗಳೆಲ್ಲ
ಮೇದಿನಿಯ ಸಕಲನದಿ ನಿನ್ನಿಂದ ಮಹಿಮೆಯಂ ಪೊಂದುವುವು
ಪಾಪಕಳೆದು |

ಮಾಧವಂ ಕಪಿಲನದಿ ರೂಪಿನಿಂ ಕೂಡುವಂ
ಸಾಧು ಋಷಿಗಳು ನೆರೆದು ವಾಸಿಪರು ತೀರದೊಳು
ಸಾದರದಿ ನಾನಿರುವೆ ಕೊನೆಮೊದಲು ಪರ್ಯಂತ ಶಿವಲಿಂಗಮಂ ಪೂಜಿಸಿ||

ಸಾವಧಾನದಿ ನಡೆಯೆ ಸಾದರದಿ ಜಗ ಪೊರೆಯೆ
ಆವಗಂ ಜಲಭರಿತಮಾಗಿರಲಿ ನಿನ್ನ ನದಿ
ತೀವಿರ್ಪ ಫಲಭರಿತವಾಗಿರಲಿ ನೀಂ ಪೋಪದೇಶ ಕೋಶಂಗಳೆಲ್ಲ |
ದೇವಸಾನ್ನಿಧ್ಯಮಾಗಿರಲಿ ನೀಂ ಪ್ರವಹಿಸುವ
ಭೂವಲಯು ಪುಣ್ಯಫಲ ಬಹಳುಂಟು ನಿನ್ನಲ್ಲಿ
ಪಾವನಳೆ ನಿಶ್ಚಿಂತೆಯಿಂ ನೀನು ಜನಸೇವೆ ಮಾಡೆಂದು ಪೇಳ್ದನಾಗ ||

ದೇವಿ ನೀ ತೊರೆದೆನ್ನ ಪೋದೆಯಾದೊಡೆ ನಾನು
ಆವ ಸುಖವಂ ಪಡೆವೆನದರಿಂದ ನೀ ಬಂದು
ದೇವಿ ಲೋಪಾಮುದ್ರೆ ಪೆಸರಿನಿಂದರ್ಧಶಾರೀರದಿಂ ಕೂಡೆನ್ನನು |
ಸೇವಿಸು ನಿರಂತರಂ ನರರೂಪದಿಂದೆನ್ನ
ಕಾವೇರಿನಾಮದಿಂದುಳಿದರ್ಧ ರೂಪದಿಂ
ದೀವಲಯು ನದಿಯಾಗಿ ಹೋಗೆಂದು ಪೇಳ್ದೊಡಾ ಸಾಧ್ವಿ ತಾಂ
ಸವಿನಯದೊಳು ||

ಅರೆ ರೂಪದಿಂದ ಲೋಪಾಮುದ್ರೆಯೆಂದೆನಿಸಿ
ಭರದಿಂದ ಸೇರಿದಳು ಪತಿಯುನ್ನು ಸೇವಿಸಲ್
ಮೆರೆದರ್ಧ ರೂಪಿನಿಂ ಕಾವೇರಿ ನದಿಯಾಗಿ ಲೋಕವಿಖ್ಯಾತೆಯಾಗಿ |
ಮೆರೆದಳೀ ವಲಯುದಲಿ ಕೀರ್ತಿಯುಂ ಪಡೆಯುತ್ತ
ಸುರಿಸಿ ಫಲಪುಷ್ಪಗಳ ಹರಿಸಿ ಪಾಪದ ಕೂಪ
ಪರಿದಳೀ ಕೊಡಗಿನಲಿ ಕೂಡುತುಪನದಿಗಳಿಂ ಸೇರಿದಳು ಸಾಗರವನು ||

ನಿಮಗಾಗಿ ಸಪ್ತತೀರ್ಥಗಳಿಲ್ಲಿ ಮೋಕ್ಷವನು
ಮಮತೆಯಿಂ ಕೊಡುತಿರಲಿ ಭಯವ ನೀವ್ ತೊರೆಯುವುದು
ಕಮಲಲೋಚನೆಯೆನ್ನ ಸೇರಿಹಳು ಮುದದಿಂದ ಮಾಡುವಳು ಲೋಕಸೇವೆ|
ಕಮಲನಾಭನ ಪಾದದಿಂದೊಗೆದ ಜಾಹ್ನವಿಗೆ
ಬೊಮ್ಮಸುತೆ ಪನ್ನೆರಡು ಬರಿಸಕೊಂದಾವರ್ತಿ
ಮಮತೆಯಿಂ ದರುಶನವ ಕೊಟ್ಟು ಕಾಯುವಳೀಕೆ ಭಾಗಿರಥೀ ಮಾತೆಯು||

ಮರುಗದಿರಿ ಮುದವಾಂತು ನಡೆಯಿರೈ ಎಲೆವನೆಗೆ
ಮರುಳು ಮಾತೇಕಿನ್ನು ಪಾವಿತ್ರ್ಯ ನದಿಯಾಗಿ
ಪರಮ ಪಾವನೆಯಾಗಿ ಮೆರೆವಳೀ ಕಾವೇರಿ ಸುರನದಿಗೆ ಮಿಗಿಲಾಗುತ |
ಸರುವ ಲೋಕದ ಜನನಿ ತೀರದೊಳು ಕರ್ಮವಂ
ಭರದಿಂದ ಮಾಡಿದೊಡೆ ಪುಣ್ಯಫಲಗಳನಿತ್ತು
ಕರುಣಿ ಕಾಯ್ವಳು ಬಂದು ಶಂಕೆಯಿಲ್ಲದಕೆಂದು ಪರಸುತ್ತ ನಡೆದನಾಗ ||

ಬೆಟ್ಟ ಗುಡ್ಡಂಗಳಿಂ ಬೀಳುತ್ತಲೇಳುತ್ತ
ಕಟ್ಟಡವಿಯೊಳ್ ನಡೆದು ಭಾಗಮಂಡಲದಲ್ಲಿ
ದಿಟ್ಟೆ ಕನಕೆಯ ಕೂಡಿ ಸುಜ್ಯೋತಿಯೊಡಗೊಂಡು ಪುಣ್ಯ ತೀರ್ಥಕ್ಷೇತ್ರವ|
ಮುಟ್ಟುತಲಿ ಪಿರಿದಾದ ಜಲನಿಬಿಡಮಾಗುತಲಿ
ಬೆಟ್ಟಮಂ ತೊರೆಯುತ್ತ ಮೈದಾನದೊಳು ರಾಮ
ಪಿತ್ಥಲಂ ಕಪಿಲನದಿ ರೂಪದಿಂ ಕಾವೇರಿಯಂ ಸೇರಿದನು ಪದುಳದಿ ||



# ೬. ಕನಕಾನದಿಯ ವೃತ್ತಾಂತವು.

---

**ಕ್ರೂ**ರತಪದಿಂ ಹರಿಯ ಮೆಚ್ಚಿಸೆ ಸುಯಜ್ಞಮುನಿ
ಘೋರವನದೊಳ್ ತಪವ ಗೈಯುತಿರೆ ದರುಶನವ
ತೋರಿದನು ಸಿರಿಪತಿಯು ವರಗಳಂ ಕರುಣಿಸಲ್ಕನುವಾಗಿ ಬಂದುನಿಂದು |
ಮಾರಮಣನಂಘ್ರಿಯಂ ಕಂಡುಮುನಿ ಹರ್ಷದಿಂ
ನೀರಜಾಕ್ಷನೆ ನಿನ್ನ ದಿವ್ಯರೂಪವನಿಂದು
ತೋರುತ್ತ ಜನ್ಮಮಂ ಸಾಫಲ್ಯಗೊಳಿಸುತ್ತ ಪೊರೆದೆನೀ ಪಾಮರನನು ||

ಧನ್ಯನಾದೆನು ದಿವ್ಯ ತೇಜವನು ಕಂಡಿಂದು
ನಿನ್ನ ದರ್ಶನದಿಂದ ಮುಕ್ತನಾಗುವೆ ನಾನು
ನನ್ನಂತರಂಗದಲಿ ನೀನಿದ್ದು ಸಂಸಾರ ಪಾಶಮಂ ಕಿತ್ತೊಗೆವುದು |
ಪುಣ್ಯಪಡೆದುದು ನನ್ನ ಜನ್ಮರಥ ಸಿರಿರಮಣ
ಉನ್ನತದ ಪದವಿತ್ತು ಜನನ ಮರಣಾದಿಗಳ
ನಿನ್ನು ತೊಡೆ ಧರ್ಮಮೂರುತಿ ನಿನ್ನ ಸಾಯುಜ್ಯವೆನಗಿತ್ತು
ಮುದದಿಂದಲಿ ||

ಸರ್ವ ಧರ್ಮವ ಬಿಟ್ಟು ಗತಿ ನೀನೆ ಪರಮಾತ್ಮ
ಸರ್ವಲೋಕ ಶರಣ್ಯ ನೀನೆಂದು ನೆರೆನಂಬಿ
ಉರ್ವಿಯೊಳು ಭಜಿಪರನು ಮುಕ್ತಿ ಈಯುತ ಪೊರೆವೆಯೆಂದರಿತೆ ನಾನು
ಜಗದಿ |
ಸರ್ವಾಪರಾಧಗಳ ಮನ್ನಿಸುತ ಪಾಮರನ
ನೋರ್ವನಂ ಭವಬಂಧನಂಗಳಿಂ ಬಿಡಿಸುತ್ತ
ಸರ್ವಾತ್ಮ ಮೋಕ್ಷಮನ್ನಿತ್ತೆನ್ನ ಪೊರೆಯುವುದು ತವಪಾದಯುಗಕೆ ಶರಣು||

ಎಂದೊಡಾ ವಿಪ್ರನಂ ವೈದಡವಿ ಮಾಧವನು
ಮುಂದೆ ನೀನೀ ಧರೆಯ ಮೇಲೆ ಕೆಲಕಾಲವಿರು
ಬಂಧನವ ಕಡಿಯುವೆನು ಶೀಘ್ರದೊಳು ಚಿಂತಿಸದೆ ಪಾಲಿಸೈ ಮಮವಚನವ|
ಇಂದು ಮುಖಿ ಯಕ್ಷಿಯಂ ಕರವಿಡಿದು ಸಂಸಾರ
ಬಂಧದೊಳು ನಲಿಯುತಿರೆ ಯಕ್ಷಿಯಿಂ ಮೋಕ್ಷಮಂ
ಪೊಂದಿ ಸುಖಿಸುವೆ ನೀನು ಪೊರಮಡು ಗಜೇಂದ್ರಗಿರಿಗೀಗಳಿಹಳಲ್ಲಿ ಯಕ್ಷಿ||

ರೂಪುಗುಣ ಶೀಲದಿಂದೀಕೆ ಪಾವನೆಯಿಹಳು
ಪಾಪನಾಶಿನಿಯಾದ ನದಿಯಾಗಿ ಹರಿಯುವಳು
ಈ ಪವಿತ್ರಳ ಕೂಡಿ ಕೆಲಕಾಲವಿರು ಜಗದಿ ಸುಕುಮಾರಿಯಂ ಪಡೆಯುವೆ|
ಶ್ರೀಪತಿ ಸುಯಜ್ಞನಂ ಸಂತವಿಸಿ ತೆರಳಲ್ಕೆ
ಆ ಪುನೀತಳ ಪಡೆಯುವಾತುರದಿ ನಡೆತಂದ
ನಾ ಪುರುಷ ಹರಿಯಾಜ್ಞೆಯಿಂ ಸೇರಿ ಯಕ್ಷಿಯಂ ತೋಷದಿಂದಿರ್ದನಲ್ಲಿ ||

ಸುಕುಮಾರಿ ಸುಜ್ಯೋತಿಯಂ ಪಡೆದು ಸಂತಸದಿ
ಸುಖದಿಂದ ಹಸುಳೆಯಾಟಂಗಳಂ ನೋಡುತ್ತ
ಸುಕುಮಾರಿಯಂ ಸಲಹಿ ಹಿರಿದಾಗಿ ಬೆಳೆವನಕ ನಲಿದರಾದಂಪತಿಗಳು |
ಸಕಲ ಲೋಕವ ಜರೆವ ಸೌಂದರ್ಯದಿಂ ಕನ್ಯೆ
ಪ್ರಕಟಮಾದಳು ಜಗದಿ ಜನಮೋಹ ರೂಪದಿಂ
ದಖಿಳ ಗುಣ ಸಂಪನ್ನೆ ಪದಿನಾರುವತ್ಸರಂ ಬಳೆದಿಹಳ್ ಕುಸುಮದಂತೆ ||

ಸುಮುಖ ನವಧಿಯ ಕಳೆದು ಯಕ್ಷಿ ಸಹವಾಸದಿಂ
ವಿಮುಖನಾಗುತ ಜಗಕೆ ಸದ್ಗತಿಯ ಪೊಂದಿದಂ
ಕಮಲಮುಖಿಯರ ಬಿಟ್ಟು ಸಗ್ಗವೇರಿದ ಭರದಿ ಹರಿಯನರ್ಚಿಸಿ
ಭಕ್ತಿಯಿಂ |

ಸುಮನಸರ ಬಲ್ಲಹಂ, ಶಕ್ರ, ಸುಜ್ಯೋತಿಯಂ
ಕಮನೀಯ ರೂಪಮಂ ಕಂಡು ಮೋಹಿತನಾಗಿ
ಮಮತೆಯಿಂದವಳನ್ನು ಪಡೆಯಲ್ಕೆ ಧರೆಗಿಳಿದು ಬಂದನವನತಿ ಮೋಹದಿ ||

ಇವಳಾವ ಸುಂದರಿಯು ಶಚಿಗಿಂತ ಮಿಗಿಲಾಗಿ
ಭುವಿಯಲ್ಲಿ ಜನಿಸಿಹಳು, ರಂಭಾದಿ ರಮಣಿಯರಿ
ಗವಮಾನವಂ ಗೈವ ಬಲುಮೋಹರೂಪಿನಿಂ ಬಂದಿಹಳು ಶಶಿವದನೆಯು |
ಇವಳನ್ನು ಪಡೆಯದಿಹ ಪುರುಷಧನ್ಯನೆ ಜಗದಿ !
ಇವಳೊಡನೆ ಸುಖ ಪಡುವ ಪುಣ್ಯವಾವನಿಗುಂಟೊ !
ಇವಳಂತೆ ಚೆಲುವರನು ಕಾಣೆನಾನಿಳೆಯಲ್ಲಿ ರತಿಯನ್ನು ನಾಚಿಸುವಳ ||

ಇವಳ ಸಹವಾಸಮಂ ಪಡೆದೆನಾದೊಡೆ ನಾನು
ಸವಿಯುತಧರಾಮೃತವ ಧನ್ಯನಾಗುವೆನಿಂದು
ಇವಳ ಮೇಲಿನ ಮೋಹ ಪೆರ್ಚುತಿರೆ ಕಾಮುಶರವೆನ್ನ ಬಹು ಬಾಧಿಸುತಿದೆ|
ಇವಳನೊಲಿಸುವೆನೀಗ ಕರವ ಪಿಡಿಯುತಲೆನ್ನ
ಸವಿರಸವನಿಳೆಗೈವೆ ಧನ್ಯಧನ್ಯನೆನುತ್ತ
ಲವಸರದಿ ನಡೆ ತಂದ ನಳಿನಾಕ್ಷಿಯನು ನೋಡಿ ಸುರರೊಡೆಯನಿಂತೆಂದನು||

ಎಲೆ ವನಿತೆ ನಿನ್ನ ನಾಂ ಕಾಮಿಸುತ ನಿನ್ನೆಡೆಗೆ
ಒಲಿದು ಬಂದಿಹೆನಿಂದು ವರಿಸೆನ್ನ ಮುದದಿಂದ
ಜಲಜಾಕ್ಷಿ ನಿನ್ನಂತೆ ರೂಪವತಿಯರ ಕಾಣೆ· ನಾಕದೊಳ್ ಲೋಕದೊಳಗೆ|
ಹಲವೇಕೆ ರಂಭಾದಿ ನಾರಿಯರ ನಾಚಿಸುವೆ
ಕುಲವಧುವೆ ಕರವಿಡಿದು ಸೇರೆನ್ನ ನೀಂ ಬಂದು
ಸುಲಭದೊಳಗುನ್ನತದ ಪದವಿಯಂ ನೀಡುವೆನು ಬಾರೆಂದೊಡಿಂತೆಂದಳು ||

ಸುರಪತಿಯೆ ಬಯಕೆಯಂ ಸಲ್ಲಿಸುವೆಯಾದೊಡಂ
ಬರುವೆ ನಿನ್ನಂ ಕೂಡಿ ನದಿಯಾಗಿ ಜಗದೊಳಗೆ
ಪರಿಯಬೇಕೆಂಬಾಸೆ ನನಗುಂಟು ನೀಡು ವರ ವರಿಸುವೆನು ನಿನ್ನ ನಾನು |
ಭರದಿ ನಿನ್ನೊಡನಿದ್ದು ಸುಖವಿತ್ತು ಪೋಗುವೆನು
ಕರುಣದಿಂ ಬಾಲಕಿಯ ಬಯಕೆಯಂ ಪೂರೈಸು
ಸುರರಾಜ ನೀನೆಂದು ಕೇಳಲ್ಕೆ ವರವಿತ್ತ ನದಿಯಾಗೆ ಸುಜ್ಯೋತಿಗೆ ||

ಸೇರಿದಳು ಸುರಪತಿಯ ಸುಜ್ಯೋತಿ ಸುಖದಿಂದ
ಭೂರಿ ಸಂತೋಷವಂ ಪಲಕಾಲವನುಭವಿಸೆ
ಸಾರಿದುದು ಕಾಮಸವಿ ಯಕ್ಷಿಸುತೆಗವನೊಡನೆ ನದಿಯಾಗೆಬಯಕೆ ಪೆರ್ಚಿ|
ಆ ರಾಯನಂ ತೊರೆದು ಮಾತೆಯಡಿಯಂ ಸಾರಿ
ಬಾರಿಂದು ನೀಂ ಜನನಿ ನದಿಯಾಗೆ ವರಮುಂಟು
ಧಾರುಣಿಯೊಳಿಂದು ನಾವ್ ಜಲರೂಪಮಂ ಪೊಂದುತುಪಕಾರಮನ್ನೆ ಸಗುವ ||

ತೀವಿರ್ಪ ಸವಿ ಜಲದ ಪುಣ್ಯವಾಹಿನಿಯಾಗಿ
ನಾವೀರ್ವರುಂ ಲೋಕ ವಿಖ್ಯಾತ ಕೀರ್ತಿಯಿಂ
ಜೀವನವನೀಯುತ್ತ ಸಕಲ ಜನ ಸೇವೆಯಂ ಕೈಕೊಳ್ವೆವಿಂದು ತಾಯೆ |
ಆವಗಂ ವನಭರಿತಮಾದ ತೊರೆಯೆಂದೆನಿಸಿ
ಕಾವೇರಿಯಂತೆ ನಾವ್ ಪುಣ್ಯತಮರೆಂದೆನಿಸು
ತೀವಲಯದೊಳು ಪರಿದು ಜನ್ಮ ಸಾರ್ಥಕಗೈದು ಹರಿವ ಬಾರಿಂದು ಮಾತೆ ||

ಮಗಳೆ ನಿನ್ನಿಷ್ಟವಂ ಮೆಚ್ಚಿದೆನು ಸುರಪತಿಯು
ಜಗದೊಳಗೆ ತೊರೆಯಾಗಿ ಜನಸೇವೆಮಾಡೆಂದು
ಬಗೆದಿತ್ತ ವರವನ್ನು ಮರೆತಿದ್ದೆ, ನೀ ಬಂದು ಕಣ್ದೆರೆದೆ ಸರಿಸಮಯದಿ |

ಒಗುವ ಜಲದಿಂ ಕೂಡಿ ಕಾವೇರಿಯೊಡಗೊಂಡು
ಒಗೆದು ದುರಿತದುಕೂಲ ಬಗೆ ಬಗೆಯ ಬಯಲಾಸೆ
ತೆಗೆದು ಶರಿರವನಿಂದು ಲೋಕಮಾತೆಯ ಸೇರಿ ನಲಿಯುವೆವು
ಪದುಳದಿಂದ ||

ಕನಕಮಯ ವಾರಿಯಿಂ ಸರಿದು ಯಕ್ಷಿಯು ಭರದಿ
ಕನಕಾಬಿಧಾನದಿಂ ನದಿಯಾಗೆ ಸುಜ್ಯೋತಿ
ಯನುನಯದಿ ತಾಯೊಡನೆ ಇಂದ್ರವರ ಬಲದಿಂದ ನದಿಯಾಗಿ
ಪ್ರವಹಿಸಿದಳು |
ಕನಕೆ ಸುಜ್ಯೋತಿಯರು ಭಾಗಮಂಡಲದಲ್ಲಿ
ಅನಘೆ ಕಾವೇರಿಯಂ ಸೇರಲ್ಕೆ ನಡೆದಿರಲ್
ಇನಿಯಳಾ ಸುಜ್ಯೋತಿ ತನ್ನತೊರೆದುದ ಕಂಡು ಕೋಪದಿಂದಿಂದ್ರನಾಗ ||

ಎನ್ನ ವರ ಬಲದಿಂದ ನದಿಯಾದೆ ನೀನಿಂದು
ಎನ್ನ ಮನ ನಿನ್ನೊಡನೆ ಸೇರಿರಲು ಮೋಹದಿಂ
ರನ್ನೆ ನಿನ್ನೊಡನಿರಲು ಹಾತೊರೆಯುತಿಹ ನನ್ನ ಕಾಮುಕನವಂ ನಿರುಕಿಸಿ |
ನಿನ್ನೊಳನುರಕ್ತನಾಗಿರುವೆನ್ನನುಳಿದು ನೀಂ
ಮುನ್ನ ಜಲರೂಪಮಂ ಪಡೆದು ದನಿಗುಡದಿಂದು
ನನ್ನಿಯಿಂ ಪೊರಟಿರುವೆ ಮನದಿಷ್ಟವಂ ಪಳಿದೆ ಕರವಿಡಿದು ಮೋಸಗೈದೆ ||

ನಾನಿತ್ತ ವರ ನಿನಗೆ ಮೋಸಕಾಕರವಾಯ್ತು
ನೀನು ಜಸಮನೆ ಬಯಸುತುಳಿದೆನ್ನ ಪೊರಮಡುವೆ
ನೀನಿರ್ದು ಮನದಾಸೆ ಪೂರೈಸದಿರಲಿಂದು ನಿನ್ನಾಸೆಯಂ ನೆನೆಯುತ |
ನಾನೆಂದ ಕಾರ್ಯಮಂ ಮರೆಯುತ್ತ ಪೊರಮಟ್ಟೆ
ನೀನು ಜಸಮಂ ಪಡೆಯಲಾರೆ ಜಗದೊಳ್ ರಮಣಿ
ನೀನಾದ ನದಿಯಲ್ಲಿ ಜಲವಿಲ್ಲದಿರಲೆಂದು ಶಾಪಮನ್ನಿತ್ತನಾಗ ||

ಅನುಚಿತವ ನೆನೆಯುತ್ತ ಮನದೊಳಗೆ ಮರುಗುತ್ತ
ಲಿಸಿಯನಂ ಬರಿಯಾಸೆಗೀಡು ಮಾಡಿದೆನೆಂಬ
ದನಿಯು ಬಾಧಿಸುತಿರಲು ಸುಜ್ಯೋತಿ ಕೈಮುಗಿದು ಬೇಡಿದಳು
ಸುರಪತಿಯನು |
ಮನದಿನಿಯ ತಪ್ಪಾಯ್ತು ನೀನಿತ್ತ ವರಮುಂಟು
ದಿನಹಲವು ನಿನ್ನೊಡನೆ ನಾನಿದ್ದು ಕಳೆದಿರಲು
ಮನದರದೆ ಮುಳಿದೆನ್ನ ಜಲರಹಿತಳಾಗೆಂದು ಶಾಪಮನ್ನಿತ್ತೆ ಕಾಂತ ||

ಕರುಣದಿಂ ಪಾಲಿಪುದು ವನಿತೆಯನು ಮನ್ನಿಸುತ
ಮರೆಮಾಡದಿರು ನಿನ್ನ ಹಳೆನುಡಿಯ ಹುಸಿಗೈದು
ಕರವಿಡಿದು ಸುಖ ಪಡೆದೆ, ಪರಿವೆ ನೀರಾಗೆಂದು ವರವಿತ್ತೆ ಹರ್ಷದಿಂದ |
ಸುರಸ ಪಡೆದಿಹ ನಿನ್ನ ಮನ ಶಾಂತವಾಯ್ತೆಂದು
ಹರಿದೆ ನಾ ನದಿಯಾಗಿ ತೆಗೆದೆನ್ನ ಶಾಪಮಂ
ಪೊರೆ ಕಾಂತ ಪುಣ್ಯವತಿಯೆನಿಸೆನ್ನ ಜಗದಲ್ಲಿ ಕೈಮುಗಿದು ಬೇಡಿಕೊಂಬೆ ||

ಸತಿಯ ದೈನ್ಯವ ಕಂಡು ಮೃಗಣ್ಣ ಕರುಣದಿಂ
ಖತಿದೊರೆಯುತಿಂತೆಂದ " ರಮಣಿ ನಿನ್ನುಪಕಾರ
ಸತತ ನಿನ್ನಯ ಸುಖವ ಮರೆಯಲಾರೆನು ನಾನು ಸಲಿಸುವೆನುನಿನ್ನ ಬಯಕೆ|
ಸತಿಯೆ ನೀಂ ಭಾಗಮಂಡಲದಲ್ಲಿ ಭಕ್ತಿಯಿಂ
ಹಿತದಿ ಕಾವೇರಿ ಕನಕಾ ಸಂಗಮದಲಿ ಸೇ
ರುತ ಪಡೆವೆ ಮುಕ್ತಿಯಂ ಚಿಂತಿಸದಿರೆಂ " ದನಾ ಸುರರೊಡೆಯ
ಪದುಳದಿಂದ ||

ಇಂತೆಂದ ಪತಿ ನುಡಿಯನಾಲಿಸುತ ಸುಜ್ಯೋತಿ
ಶಾಂತಿಯಂ ಪೊಂದಿದಳು ಕಾವೇರಿ ಕನಕೆಯರ
ಪಂಥವಂ ಸೇರಿ ತ್ರಿವೇಣಿ ಸಂಗಮವೆನಿಪ ಪರಿಶುದ್ಧ ಸಂಗಮದಲಿ |
ಸಂತಸದಿ ಮಿಾಯಲ್ಕೆ ಮುಕ್ತಿಯಂ ಪಡೆಯುವರು
ಅಂತರಾತ್ಮನ ಲೋಕಮಂ ಪೊಂದಿ ಸುಖಿಸುವುದ
ಕಿಂತ ಸುಖವಿನ್ನುಂಟೆ ಜಗದಲ್ಲಿ ರಾಮವಿಠಲನ ನಾಮರಸವೊಸರಲು ||



## ೭. ತೀರ್ಥಕ್ಷೇತ್ರಗಳ ಮಹಿಮೆ.



ಧರೆಯ ಮೇಲುಳಲ್ಕೆ ನಿಜ ಕಮಂಡಲುವಂದು
ಬರಿದಾದ ಪಾತ್ರೆಯಂ ಕಾಣುತ್ತಗಸ್ತ್ಯಮುನಿ
ಪರಮ ಕೋಪದಿ ನಿಂದು ನೋಡಲ್ಕೆ ನಾಲ್ಮೊಗನು ಬಂದು ಸಂತೈಸಿ ಮುದದಿ |
ಧರೆಯ ಕ್ಷೇಮಕ್ಕಾಗಿ ಹೊರಟಿರುವ ಕಾವೇರಿ
ಯುರುತರದ ಮಹಿಮೆಯಂ ಪೇಳಿ ಕಮಲಾಸನಂ
ವಿರಚಿಸಿದ ಬೇರೊಂದು ಕುಂಡಿಗೆಯ ಪೆಸರಿತ್ತು ಬೊಮ್ಮಕುಂಡಿಗೆ ಎನ್ನುತ ||

ಸೇರುವುವು ಗಂಗಾದಿ ತೀರ್ಥಂಗಳೆಲ್ಲ ಬಳಿ
ಸಾರಿ ಜಲ ಮುಟ್ಟಿದೊಡೆ ಪಾಪಗಳು ಕೊನೆಗಂಡು
ವಾರಿಯನ್ನೀಂಟಿದೊಡೆ ಮೋಕ್ಷಮಂ ಪೊಂದಲ್ಕೆ ಪರಿಶುದ್ಧಮಲ್ತೆ ಜಗದಿ |
ಈ ರೀತಿಯೊಳ್ಸಕಲ ನದಿಗಳೊಳು ಕಾವೇರಿ
ಪಾರರಹಿತಳು ಜಗದಿ ಮುಳುಗಲ್ಕೆ ಕುಡಿಯಲ್ಕೆ
ನೀರ ನೋಡಿದೊಡಾಗ ದೋಷಮಂ ರೋಗಮಂ ಪರಿಹರಿಸಿಮೋಕ್ಷವೀವಳ್ ||

ಮುಂದೆ ಭಾಗಂಡಪುರಿ ಕನಕೆ ಸುಜ್ಯೋತಿಯೊಡ
ನಿಂದುಮುಖಿ ಕೂಡಿ ತ್ರಿವೇಣಿ ಸಂಗಮವೆನಿಸಿ
ಬಂಧಗಳ ನೀಗಿಸುತ ಮೂರು ಸಲಮಿಂದವರ ಮುಕ್ತಿಯಂ ದೊರಕಿಸುತ್ತ|
ಬಂದಿಲ್ಲಿ ಮಾಡಿದೊಡೆ ಪೈತೃಕಂಗಳ ಮುದದೊ
ಳಿಂದಹುದು ಮಿಗಿಲಾಗಿ ಶತಗಯಾ ಕರ್ಮಕ್ಕೆ
ಇಂದಿರಾರಾಧನೆಯು ಪರಮಾತ್ಮ ಸಾಯುಜ್ಯಮನ್ನಿತ್ತು ಸಲಹುತಿಹುದು ||

ವರ ಹರಿಶ್ಚಂದ್ರಾಶ್ರಮದಿ ಬ್ರೊಮ್ಮ ಲಿಂಗಮಂ
ವಿರಚಿಸುತ ಪೂಜಿಸಲ್ಕಾಲಿಂಗವಾಶ್ರಮದಿ
ನೆರೆ ನಿಂತು ತೆಗೆಯಲ್ಕೆ ಬಾರದಿರೆ ಬಿಟ್ಟನಲ್ಲಿಯೆ ಲಿಂಗವಿಹುದು ನೆಲಸಿ |
ಪರಿಯುವಳು ಕಾವೇರಿಯಾಶ್ರಮದಿ ಮುದದಿಂದ
ಧರೆಯೊಳಗೆ ಕೇದಾರ ಸಮನೆನಿಸಿ ತೊಳಗುವುದು
ಹರನಿರಲು ತೀರದೊಳಗೀ ಪವಿತ್ರಕ್ಷೇತ್ರ ಪುಣ್ಯತಮವೆನಿಸುತಿಹುದು ||

ಬಲದ ಸುಳಿಯಿಂ ತಿರುಗಿ ಕಾವೇರಿ ಪರಿಯಲ್ಕೆ
ಬಲ ಮುರಿಯನಾಮದಿಂ ಪೊಳೆದು ಮುಂದಿನ ತೀರ
ಬಳಿಕ ತೆರಳಲು ಮುಂದೆ ಗೋಕುಲಕೆ ಸಮನೆನಿಪ ವ್ಯಾಘ್ರಪಾದ ಕ್ಷೇತ್ರವು |
ಪೊಳೆಯಲ್ಕೆ ಸಿರಿರಾಮ ನಡಿಯಿಟ್ಟ ಪರಿಶುದ್ಧ
ನೆಲೆ ಇಹುದು ರಾಮಾಶ್ರಮವು ಬೆಳಗಿ ಕಪಿಲಾದಿ
ಸಲಿಲಗಳ ಸಂಗಮವು ಪುಣ್ಯಪ್ರದೇಶಂಗಳಿವು ಜಗದಿ ನದಿತೀರದಿ ||

ಕಾವೇರಿಯುಭಯತೀರದೊಳು ಘನ ಪುಣ್ಯಮ
ನ್ನೀವ ಗುರುತರದ ನೆಲೆಯಿಹವು ಬಹು ಸಂಖ್ಯೆಯಿಂ
ಕಾವಳಾ ಕಾವೇರಿ ಈ ಕ್ಷೇತ್ರದೊಳ್ಮಿಂದ ನರರನ್ನು ದುರಿತವೊರೆಸಿ |
ಆವಗಂ ಸದ್ಭಾವಮನ್ನಿತ್ತು ಸಲಹುವಳ್
ದೇವಾದಿ ದೇವರ್ಗೆ ಮಿಗಿಲಾದ ದೇವಿಯಿರೆ
ದೇವಿಯಂ ಭಾವಿಸದ ನರನರಕಕೈದುವಂ ಸುಲಭೆಯಂ ನುತಿಸದಿರಲು ||

ಜಲಧಾರಿ ಇವಳಾರು ! ಬೆಟ್ಟದೊಳ್ಮೂಡಿರುವ
ಬಿಳಿನೊರೆಯ ನೆರೆಯುತಿಹ ದಧಿನದಿಯೊ ಪಾಲೆರದು
ಸುಲಭರೊಳು ವಾಸಿಸುವ ಸುರಭಿಯೋ ಸುಳಿಯುತಿಹಳಿವಳಾರನರಸುತ್ತಲಿ |

ಜಲಬಿಂದುಗಳನೆಸೆದು ಸಕಲರೋಗವ ತೊಳೆಯು
ತಿಳಿಯ ಮಾಯವ ನೆಳೆದು ದೂರಕೊಯ್ಯುತಲಿರುವ
ಕಳೆವೆತ್ತು ಸಹ್ಯಾದ್ರಿಯೊಳಗುದಿಸಿ ಸುಧೆಯನ್ನು ತರುತಿರುವಳಿವಳಾವಳು ||

ಮಾಯದಿಂ ಬಂದಿರಲು ಮಾಯಾವಿ ಇವಳಲ್ಲ
ತೋಯಮಂ ನೀಡುವಳು ತೋಯಮಿವಳೊಳಗಿಲ್ಲ
ಕಾಯಮಂ ಕಾಯುವಳು ಕಾಯರಹಿತಳು ದೇವಿ ಕಾಮಶರಜಾಲದಲ್ಲಿ |
ವಾಯುವಂ ಸೇರಿಹಳು ಭಕ್ತಿ ಪರಿಮಳ ಬೀರಿ
ತಾಯಿಯಾದಳು ಹಿರಿಯ ಮಾತೆಗೀ ಮಾಯಾವಿ
ಮಾಯಮಂ ತೇಲಿಸುತ ಕಣ್ಗಳಂ ತೊಳೆಯುತ್ತ ದಿವ್ಯನೋಟವನೀವಳು ||

ಆರಿವಳ ಬಸುರಿನೊಳ್ ಭಕ್ತಿಯಿಂ ನೆಲಸುವರೊ
ಆರಿವಳ ಮಿತ್ತಿಗೆಯ ದೇಹದೊಳು ಧರಿಸುವರೊ
ಆರಿವಳ ಜಲಬಿಂದುವಂ ಸವಿದು ಮಜ್ಜನವ ಮಾಡುವರೊ ಸಂಪ್ರೀತಿಯಿಂ|
ಆರಿವಳ ನಾಮಮಂ ನಿಶಿದಿನವು ತುತಿ ಗೈದು
ಆರಿವಳ ಭಕ್ತರೋ ನಲ್ಗತೆಯ ಕೇಳುವರೊ
ಶ್ರೀರಾಮವಿಠ್ಠಲನು ಸಲಹುವನು ಶಕ್ತರವರೆಲ್ಲರಂ ಮೋಕ್ಷವಿತ್ತು ||



## ೮. ಯಾತ್ರಾಫಲ.

ಕಾವೇರಿಯುದಿಸಿದಳು ಸಹ್ಯಾದ್ರಿಯೊಳು ಬಂದು
ಆವ ಶಿವೆ ಲಕ್ಷ್ಮಿಯರ ಶಕ್ತಿಯಿಂ ಬಂದಿಹಳು
ಆವಗಂ ಜಲ ಪೂರ್ಣ ಮಾಗಿರುತ ಸಕಲಜೀವಿಗಳನ್ನು ಸಲಹುತಿಹಳು ।
ಪಾವನಳು ಷಟ್ಪದಿಯ ಝೇಂಕಾರದಿಂ ಪರಿದು
ತೀವಿರ್ಪ ಮಧುಪೂರ್ಣ ಜೀವನವನೊಸರುತ್ತ
ಜೀವ ಕುಸುಮದಿ ಹೊಳೆದು ರಂಜಿಪಳು ಭಾರತದಿ ಕರ್ಣಾಟದೇಶದಲ್ಲಿ ॥

ತವರೂರು ಸಹ್ಯಾದ್ರಿ ಕಲ್ಲು ಗುಡ್ಡಂಗಳಿಂ
ಕವಿದಡವಿ ಮುಳ್ಗಳಿಂ ತೋರ್ಪುದಾದರು ತುಂಬಿ
ನವರತ್ನದಿಂ ಹೊಳೆದು ರಂಜಿಸುವುದೀ ಗಿರಿಯು ಸೂಕ್ಷ್ಮದಿಂ ನೋಡಲಲ್ಲಿ।
ಕವಿಗೆ ಕವಿಯಾದವನು ಕಲ್ಗಳಿಂ ಮುಳ್ಗಳಿಂ
ಕವಿತೆಯಿಂ ಸಹ್ಯಾದ್ರಿಯೊಳ್ಬರೆದ ಗಿರಿಸರಣಿ
ಗವಿಗಳಂ ಜೋಡಿಸುತ ಕಾವೇರಿ ವಾಣಿಯಿಂ ಪಾಡಿದನು ಜಗದ ಕವಿತೆ ॥

ಆರ್ತರಂ ಸಲಹಲ್ಕೆ ನಿಂದಿರುವ ಹರಿಯಂತೆ
ಧೂರ್ತರಂ ದಹಿಸಲ್ಕೆ ಬಂದಿರುವ ಯಮನಂತೆ
ಆರ್ತಿಯಿಂ ಮಿಂದವರ ನಾಕಕೇರಿಸುವಂತೆ ಜನನ ಮರಣಾದಿಗಳನು ।
ಚಿತ್ತದಿಂ ತೆಗೆಯಲ್ಕೆ ಮೋಕ್ಷದೇವತೆಯಂತೆ
ಮಿತ್ರೆ ಕಾವೇರಿಯಂ ಪೆತ್ತಗಿರಿ ಸಪ್ತಋಷಿ
ಯುತ್ತಮರ ನೇಹಮಂ ಜಾನಮಂ ಕುಡುವಂತೆ ನಿಂದಿಹನು ಗಂಭೀರನು ॥

ಏಳು ಋಷಿಗಳ ಪೊತ್ತು ಮೂರು ನದಿಗಳ ಪೆತ್ತು
ಏಳೇಳು ಜನ್ಮಮಂ ಪರಿಶುದ್ಧ ಗೈಯುತ್ತ
ಆಳುವಂ ಗಿರಿಗಳಂ ಕರ್ಣಾಟ ಕೊಡಗಿನೊಳ್ ಮಲೆನಾಡದೇಶದಲ್ಲಿ |
ಭಾಳಲೋಚನನಿರುವ ಕೈಲಾಸಗಿರಿಯೆಂತೆ
ಮೇಲಾದ ನದಿಗಳಿಂ ಪಾವಿತ್ರ್ಯಮಾಗಿರುವ
ಸಾಲವೃಕ್ಷಂಗಳಿಂ ಫಲಮೂಲ ತರುಚಯದಿ ತುಂಬಿಹುದು ಪಡುವೆಟ್ಟವು||

ಭೋರೆಂಬ ದನಿಗುಡುವ ಪಶ್ಚಿಮದ ಕಡಲನ್ನು
ಮೋರೆ ಮಾಡುತ ನಿಂದು ಕಳುಹಿದಂ ಪೆತ್ತ ಕಾ
ವೇರಿಯಂ ಮೂಡಣದ ಸಾಗರನ ಸೇರಲ್ಕೆ ವಿಧಿಯಿತ್ತು ಸೇವಿಸಲ್ಕೆ |
ತೋರುತಿಹ ಜಲಧಿಯಂ ಧಿಕ್ಕರಿಸಿ ಕೊರಳೆತ್ತಿ
ಶೌರಿಯುವ ತಗ್ಗಿಸಿದ ಸಹ್ಯಾದ್ರಿ ಗಂಭೀರ
ಏರಿಹನು ಗಗನಕ್ಕೆ ವಿಘ್ನಮಂ ಪರಿಹರಿಪ ವಿಘ್ನಮೂರ್ತಿಯ ತೆರದೊಳು ||

ಕಮಲಪೀಠನು ನೆಟ್ಟ ಅಶ್ವತ್ಥ ವೃಕ್ಷಮಂ
ಕಮನೀಯ ತಳಿರಿನಿಂ ಬೆಳೆದಿಹುದ ನೋಡಲ್ ಪ
ರಮ ಹರುಷವಾದಪುದು ಫಲಪುಷ್ಪಚಯಗಳಿಂ ತುಂಬಿಹುದು ಪಾವನತರು|
ಕಮಲನಾಭನ ಹರನ ದೇಗುಲಂ ಮೆರೆದಿರಲ್
ವಿಮಲ ಮುನಿಗಳು ಬಂದು ಕಾವೇರಿಯೊಳು ಮಿಂದು
ಅಮರ ಪದವಿಯು ಪಡೆದು ಹರಿಹರರ ಪೂಜಿಸುತ ನೆಲಸಿಹರು
ಸಹ್ಯಾದ್ರಿಯೊಳ್ ||

ದಾನವಂ ಕಾಲಕನಗಸ್ತ್ಯನಂ ನುಂಗಲ್ಕೆ
ಮುನಿವೇಷದಿಂ ಬಂದು ಮೇಲೆರಗಲಾ ಋಷಿಯು
ದಾನವನ ಕಾಲಿನಿಂದೊದೆಯಲ್ಕೆ ತಡೆಯಲಾರದೆ ದುರುಳ ಬೀಳ್ದನಾಗ |

ಈ ನದಿಯ ಕುಂಡದೊಳಗುರುಳಲ್ಕೆ ಬಹುದುರಿತ
ಕಾನನವ ಬಗೆಹರಿಸಿ ಮುಕ್ತಿಯಂ ತಂದಿತ್ತು
ದಾನವನ ಬಹುತರಾನಂದದೊಳ್ ಕೆಡವಿದಳು ದಿವ್ಯದೇಹವನೀಯುತ ||

ಒಮ್ಮೆ ನಾರದ ಮುನಿಯು ದೇಶ ಸಂಚಾರದಿಂ
ಬೊಮ್ಮಾಂಡಮೆಲ್ಲಮನ್ನರಿಯುವಾತುರದಿಂದ
ಬೊಮ್ಮಗಿರಿಯಂ ಸೇರಿ ಕಾವೇರಿಯಂ ಕಂಡು ಮಿಾಯಲಾಸೆಯ
ಪೊಂದುತ |
ಸುಮ್ಮಾನದಿಂ ಮುಳುಗಿ ಮಜ್ಜನವ ಮಾಡಲ್ಕೆ
ಚಿಮ್ಮುತಿರೆ ಹೊಸ ಹುರುಪು ಲಘುಮನವು ಹೊಳೆಯುತಿರೆ
ಹೊಮ್ಮುತಿರೆ ಭಕ್ತಿರಸ ಮನದೊಳಾಶ್ಚರ್ಯದಿಂ ಕಾರಣವ ಯೋಚಿಸಲ್ಕೆ||

ನಾನಿಂದುವೆರೆಗೆ ಬಹು ನದಿಗಳೊಳ್ ಮಾಡಿಹೆ
ಸ್ನಾನಮಂ ಮನಮಿಂತು ಘನತೆಯಂ ಸಮತೆಯಂ
ಕಾಣದಿರೆ ಕಾವೇರಿ ಜಲದಲ್ಲಿ ಮುಳುಗಲ್ಕೆ ಬಲುಹರುಷಪಡೆದೆ ನಾನು |
ಮಾನಿನಿಯ ಮೈಮೆ ಮಿಗಿಲಾಗಿಹುದನರಿತೆ ನಾ
ನೀನದಿಯನೆಂದು ಮುನಿ ಚಿಂತಿಸಲ್ ಶಂಕರಂ
ಕ್ಷೋಣಿಯೊಳು ಕಾವೇರಿ ಮಿಗಿಲೆಂದು ಬಿತ್ತರಿಸಿ ನಾರದನ ಸಂತವಿಸಿದ ||

ಕಾಡೊಳಗೆ ಜೀವಿಸುವ ವನವಾಸಿಯಾಗಿರುವ
ಕೋಡಗಂ ವಿಧಿವಶದಿ ಸಹ್ಯಾದ್ರಿಯಂ ಪೊಂದಿ
ಹೇಡಿತನವಂ ಬಿಟ್ಟು ನಾಡಿಗರ ಹಾರುವರ ಸೇವಿಸುತ ಸುಮತಿಯಿಂದ |
ಮಾಡಿ ಜೀವನ ಫಲವ ಭಕ್ಷಿಸುತ ವೈರಾಗ್ಯ
ಮೂಡಿರಲು ಬಾಡಿರಲ್ಕಾತ್ಮಾಭಿಮಾನ ಹರಿ
ನಾಡಿನೊಳು ವಾಸಮಂ ಮಾಡಲ್ಕೆ ಮೋಕ್ಷಮಂ ಪಡೆಯಿತಾ
ಘನಮರ್ಕಟ ||

ತುರುವೃಂದ ನಡೆದಿರಲು ಕಾಡೊಳಗೆ ಮೇವತಾ
ವರಸುತ್ತ ಹೆಬ್ಬುಲಿಯು ಘರ್ಜನೆಯ ಗೈಯುತ್ತ
ತುರು ಜಯದ ಮಧ್ಯದೊಳು ಹಾರಿ ಪಶುವೊಂದನಂ ಪಿಡಿಯಲ್ಕೆ
ಭಯದಿಂದಲಿ ||
ಹರಿದೋಡಿದುವು ಮಿಕ್ಕ ಗೋವ್ಗಳೆಲ್ಲವು ಚದರಿ
ಮರುಗಿತಾ ಬಡಹಸುವು ಕಂದನಂ ನೆನೆಯುತ್ತ
ಕರುಣದಿಂ ಹುಲಿರಾಯ ಕೆಲನಿಮಿಷ ಕಳುಹೆನ್ನ ಕಂದನಂ ಕಂಡು
ಒಹೆನು ||

ಕಂದ ಹಸಿದಿಹನಲ್ಲಿ ಪಾಲ್ಗೊಟ್ಟು ಕೆಳದಿಯರ
ಬೃಂದದೊಳು ಬಿಟ್ಟವನ ಬರುವೆನೆನೆ ದುರುಳಹುಲಿ
ಇಂದು ಸಿಲ್ಕಿದ ಫಲವ ಕೈಬಿಟ್ಟೆನಾದೊಡಂ ನೀಂ ಬಹೆಯ ನಿಜದಿಂದಲಿ |
ಕಂದನೊಳ್ ಮಮತೆಯಂ ನಟಿಸುತ್ತ, ಜೀವಮಂ
ಇಂದೆನ್ನ ಕೈಯಿಂದ ರಕ್ಷಿಸಲ್ ಪುಸಿಯಾಡಿ
ಮಂದಿಯೊಡಗೂಡಲ್ಕೆ ಬಿನ್ನೈಪ ನಲ್ನುಡಿಯ ನಂಬಲಾರೆನು ಕೇಳೆಲೆ ||

ಸಟೆಯನಾಡುವಳಲ್ಲ ಕಾವೇರಿಯುದಿಸಿರುವ
ಅಟವಿಯೊಳು ನಾನಿಂದು ಕಾವೇರಿಯಾಣೆಗುಂ
ದಿಟವಾಗಿ ಶೀಘ್ರದೊಳು ನಿನ್ನೆಡೆಗೆ ಬರುವೆನಾಂ ಮೊಲೆಯಿತ್ತು ಕಂದನಿಂಗೆ|
ಕಠಿಣ ಶಪಥವ ಗೈದ ಪಶುವನಾಹುಲಿಯಂದು
ಕಟುತರಾಜ್ಞೆಯನಿತ್ತು ಮಮತೆಯಿಂ ಕಳುಹಿದಂ
ದಟವಿಯಂ ತೊರೆಯುತ್ತ ಕಂದನಂ ಕಾಣುತ್ತ ಕೆಳದಿಯರ ಮಾತಾಡಿಸಿ||

ಶಪಥಮಂ ತಿಳುಹುತ್ತ ಸತ್ಯಮಂ ಸಲಹಲ್ಕೆ
ಚಪಲೆ ಮಗುವಂ ಕೆಳದಿಯರ ವಶದಿ ಬಿಡು ತೈದಿ
ವಿಪಿನದೊಳು ತನಗಾಗಿ ಕಾದಿಹ ವ್ಯಾಘ್ರನಂ ಕಂಡು ತೋಷದಿ ನಿಂದಿರೆ|

ಕುಪಿತನಾಗದೆ ನೀನು ಸೇವಿಸೆನ್ನಯಮಾಂಸ
ವಿಪಿನೇಶ ಕೊಳ್ಳೆನಲು ಕಾವೇರಿಯಾಣೆಯಂ
ಅಪರಿಮಿತ ಮಹಿಮೆಯಂ ನೆನೆಯುತ್ತ ಹುಲಿಯೆಂದು ಮರುಗಿದನು
ದುಃಖದಿಂದ ||

ಇವಳ ನಾಂ ವಧಿಸುತ್ತಲೀ ಪುಣ್ಯ ಪಶುವನ್ನು
ಸವಿದು ನರಕದಿ ಬಿದ್ದು ಕೆಡುತಿದ್ದೆ ನಾನರಿತೆ
ನಿವಳ ಭಕ್ತಿಯಪಾರಮಾದುದಿದು ತರಳೆನೀಂ ಪೋಗೆನ್ನುತಸುವಕಳೆಯೆ |
ಜವದಿಂದಲುಸುರೆಳೆದು ದೇಹನೀಗುತಲಂದು
ಅವನಿಯೊಳಗೊರಗಿದನು ಹುಲಿರಾಯನಾಗಲಾ
ಸವಿನಯದ ಪಶು ಬಂದು ಕೆಳದಿಯರ ಸಂತೈಸಿ ಸುಖದಿಂದ ಬಾಳುತಿತ್ತು ||

ಸತ್ಯವನು ಕಾಪಾಡಿ ಕಾವೇರಿ ಮಹಿಮೆಯಂ
ನಿತ್ಯ ಲೋಕದಿ ಬೀರಿ ಮೆರೆದ ಗೋವಿನ ಕಥೆ
ಸ್ತುತ್ಯಮಾದುದು ಸಕಲ ಜೀವಿಗಳ ಸಲಹುವಳು ಕೇಳ್ದರಂ ಪಠಿಸಿದರನು |
ಬಿತ್ತರಿಸೆ ಕಾವೇರಿ ಮಹಿಮೆಯಂ ಲೋಗರ್ಗೆ
ಚಿತ್ತದೊಳು ನೆನೆಯಲ್ಕೆ ಮಜ್ಜನವ ಮಾಡಲ್ಕೆ
ನಿತ್ಯ [illegible]ಸಿನಿತ್ತು ಪರಮಸುಖದಾನಂದದಿಂ ಕಾವಳೀ ವರನದೀ ||
ಕಾವೇರಿ

[illegible]ಯುದಿಸಿರುವ ಬೆಟ್ಟದಿಂ ಮೇವನ್ನು
ಗೋವುಗಳು ಭಕ್ಷಿಸಲ್ಕಾರೋಗ್ಯದಿಂ ಬೆಳೆದು
ತೀವಿದತಿ ಪಾಲ್ಗರೆದು ಸಕಲಸೌಭಾಗ್ಯಂಗಳನ್ನಿತ್ತು ಪೆರ್ಚುತಿಹವು |
ಸೇವಿಸಲು ತೀರ್ಥಮಂ ಸರ್ವರೋಗಂಗಳಂ
ಕಾವೇರಿ ಪರಿಹರಿಸಿ ಮುಳುಗಲ್ಕೆ ಮುಕ್ತಿಯ
ನ್ನಾವಗಂ ಸುಖಗಳಂ ಭಕ್ತಿರಸ ಭಾವನೆಯನೀವಳೀ ವಾರಿನಾರಿ ||

ಕೊಡಗು ಮಲೆನಾಡಿನೊಳು ಮೂಡಿದಳು ಮುದದಿಂದ
ಪಡುವೆಟ್ಟದಿಂದಿಳಿದು ಮೂಡದೆಸೆ ಸಾರಿದಳು
ನಡೆನಡೆದು ಬಡಬಡನೆ ಬೆಟ್ಟದಿಂದುರುಳುತ್ತ ಗಳಗಳನೆ ಬಳುಕುತ್ತಲಿ |
ಹಡೆದ ಜನನಿಯತೆರದೆ ಜೀವನವ ನೀಯುತ್ತ
ನಡೆದಳಾ ಸಿಂಗಾರಿ ಕುಂಭಜನವರನಾರಿ
ಬಡವರಂ ಪಾಲಿಸುತ ಧನದರಂ ಪೆರ್ಚಿಸುತ ಸೇರಿದಳು ಸಾಗರವನು ||

ಕಾವೇರಿಯಮ್ಮ ಸಿರಿಪಾದಕ್ಕೆ ಗೋವಿಂದ
ಗೋವಿಂದನೆಂಬ ಜಪವಾಗಸದಿ ಕಳೆಯೇರು
ತಾವಗಂ ಮೊಳೆಯುತಿರೆ ಪಕ್ಷಿಗಳ ಚಿಲಿಪಿಲಿಯು ತರುಚಯದ ಶಬ್ದಂಗಳು |
ಕಾವೇರಿ ನಾಮವಂ ಪಾಡುತ್ತ ಪಾರುತ್ತ
ಕಾವೇರಿ ಪದಕೆರಗಿ ಧೂಳು ಶಿರದೊಳಗಿಟ್ಟು
ದೇವಿಯೊಳು ಭಕ್ತಿಯಿಂ ಲೋಗರಂ ಸಂತಸದೊಳೋಲೈಸಿ ಪೊಗಳುತಿಹವು ||

ಕನ್ನಡದ ನುಡಿಯಿಂದ ಮೊರೆಯುವಳು ಕಾವೇರಿ
ಕನ್ನಡದ ಕತ್ತುರಿಯ ಪರಿಮಳವ ಬೀರುವಳು
ಕನ್ನಡದ ಬೆಡಗಿನಿಂ ಸೊಗಸಿನಿಂದಡಿಯಿಟ್ಟು ಬಳುಕುತ್ತ ನಡೆದಿರುವಳು |
ಕನ್ನಡದ ಕೊಡಗಿನೊಳು ಪುಟ್ಟಿರುವ ಹೆಮ್ಮೆಯಂ
ಕನ್ನಡದ ದೇಶದೊಳು ಬೆಳೆದಿರುವ ಗರ್ವಮಂ
ಕನ್ನಡದಕಾವೇರಿ ತೋರಿದಳು ಮುನ್ನಡೆದು ಕನ್ನಡದ ನುಡಿಯ ತಾಯಿ||

ಕನ್ನಡಿಯು ಕವಿಗಳಿಗೆ ಬೆಳ್ನಡೆಯ ಕಾವೇರಿ
ಕನ್ನಡಿಗರಾರಾಧ್ಯ ದೇವತೆಯು ಮಲೆನಾಡ
ಚೆನ್ನೆಯಂ ಕಾಣದರು ಕರ್ಣಾಟ ದೇಶದೊಳಗಿಲ್ಲವೀ ರಾಜ್ಯದಲ್ಲಿ |

ಚಿನ್ನಕುಂ ರನ್ನಕುಂ ಮಿಗಿಲಾದ ಸುಖವಿತ್ತು
ಕನ್ನಡದ ಸಾಮ್ರಾಜ್ಯಮಂ ಪೊರೆವಳೀ ಜನನಿ
ಕನ್ನಡದ ನಾಡಿಗರಿಗಿದುವೆ ಧನ ಜೀವನವು ಕರ್ಣಾಟ ನದಿಗೆ ಶರಣು ||

ಕನ್ನಡಿಗರಿದ ನೋಡಿ ಕನ್ನಡಿಯ ಬಲ್ಮೆಯಂ
ಕನ್ನಡದ ಚೆಲುವಿಕೆಯ ಸವಿದು ಕನ್ನಡ ಬಾಸೆ
ಯನ್ನಿವಳ ದನಿಯಿಂದ ಹೊಳಲಿನಿಂ ಶ್ರುತಿವಿಡಿದು ಬೀಣೆಯೊಳು
ಬಾಜಿಸುವುದು |
ಕನ್ನಡದ ನುಡಿಮೂಡಿ ಕನ್ನಡದರವಿಹೊಳೆಯೆ
ರನ್ನಗನ್ನಡಿಯಲ್ಲಿ ನೂರಾರು ರವಿಹೊಳೆದು
ಕನ್ನಡದ ಸೀಮೆಯೊಳು ಕಿರಣಗಳನೆಸೆದಿರಲು ನೋಡಿರೈ ಕನ್ನಡಿಗರೆ ||

ಚರಿತೆಯಿದನಾಲಿಪುದು ಕಾವೇರಿ ನಾಮವಂ
ಸರುವಜನ ಜಪಿಸುವುದು ಮನಸಿನೊಳು ನೆನೆಯುತ್ತ
ವರತೀರ್ಥದೊಳುಮಿಂದು ಮುಕ್ತಿಯನು ಕರೆತಂದು ಭಕ್ತಿಯನು
ನಿಲಿಸುತಂದು |
ವಿರಜೆತೀರ್ಥವಸವಿದು ಸಪ್ತತೀರ್ಥಕೆ ಮಣಿದು
ತರುಮೂಲದೊಳು ನಿಂದು ಮಹಿಮೆಪೊಗಳುತ ತಿಳಿದು
ಪರಮಭಾಗ್ಯವಪೊಂದಿ ಸಕಲ ದುರಿತವನೀಗಿ ಬೇಡಿರೈ ಬಂದು ಬೇಗ ||

ಶ್ರೀರಾಮ ನುಡಿಸಿದಂ ಕಾವೇರಿ ಚರಿತೆಯಂ
ವೀರಮಾತೆಯ ಪರಮ ಪುಣ್ಯಕತೆಯಂ ಮುದದಿ
ಶ್ರೀರಾಮನಡಿಗಳನ್ನಾವಗಂ ನೆನೆಯುತಿಹ ಪದ್ಮನಾಭನ ಮುಖದೊಳು |
ವಾರಿಗಳ ಸುರಿಸುತಿಹ ಕಾವೇರಿನದಿಯಂತೆ
ಸಾರಸಾಕ್ಷನ ಭಕ್ತಿ ವಾರಿವಾಹಿನಿ ಹರಿದು
ಸೇರಲಜಪಿತನೊಡನೆ ಕರ್ಣಾಟ ಸೋದರರು ಸಾಧುಗಳ ಚರಿತೆಯರಿತು ||

ಜಯ ಜಯತು ಜಾಹ್ನವಿಗೆ ಹರಿಪಾದ ಸಂಭವೆಗೆ
ಜಯ ಜಯತು ಭಾಗೀರಥೀ ಜನನಿ ಕಾವೇರಿ
ಜಯ ಜಯತು ಕರ್ಣಾಟ ಸಾಮ್ರಾಜ್ಯ ಭಾಗ್ಯನಿಧಿ ಜಯ ಜಯತು
ಜಯಮಂಗಳಂ |

ಜಯ ಜಯತು ಸಿರಿರಾಮವಿಠ್ಠಲನ ಕಾವೇರಿ
ಜಯ ಜಯತು ಕಲಶಜನ ಮಾರಾಣಿ ಗೀರ್ವಾಣಿ
ಜಯ ಜಯತು ಮಲೆನಾಡ ಕೀರ್ತಿಲತೆ ಶುಭದಾತೆ ಜಯ ಜಯತು
ಶುಭಮಂಗಳಂ ||೨೫೦||

ಸಂಪೂರ್ಣಂ.





